# ಸಿದ್ಧಗಂಗಾ

ಸಂಪುಟ-32 ಸಂಚಿಕೆ-12 ಡಿಸೆಂಬರ್-1996.



ತ್ರಿವಿಧ ದಾಸೋಹ ಮೂರ್ತಿಗಳಾದ ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ**

## ವಜ್ರಮಹೋತ್ಸವ ಪ್ರತಿಷ್ಠಾನ

**ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.**

* ಶ್ರೀ ಸಿದ್ಧಗಂಗೆ ವಿದ್ಯಾರ್ಥಿಗಳಿಗೆ ಶಾಂತವಾದ ವಿದ್ಯಾಸಾಗರ.
* ಶ್ರೀ ಶ್ರೀಗಳವರ ನಿರಂತರ ಶ್ರಮದಿಂದ 5 ಸಹಸ್ರ ಎಲ್ಲಾ ಕೋಮಿನ ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದಾರೆ.
* ಪ್ರಸ್ತುತ ವಿದ್ಯಾರ್ಥಿಗಳ ಕೊರತೆಯನ್ನು ನಿವಾರಿಸುವ ಯೋಜನೆ.
* ಸುಸಜ್ಜಿತವಾದ ಭವ್ಯ ದಿವ್ಯ ವಿದ್ಯಾರ್ಥಿನಿಲಯ ಮತ್ತು ಪ್ರಸಾದ ನಿಲಯಗಳು ನಿರ್ಮಾಣವಾಗುತ್ತಿವೆ.
* ಇವು 6 ಕೋಟಿರೂಗಳ ಯೋಜನೆ. ಭವನಗಳು ಮುಕ್ತಾಯ ಹಂತದಲ್ಲಿವೆ.
* ನಾಡಿನ ಜನತೆ ಮತ್ತು ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಯೋಜನೆಗೆ ನೆರವಾಗುತ್ತಿದ್ದಾರೆ.

**ವಜ್ರಮಹೋತ್ಸವ ಸಮಾರಂಭ 1997 ಫೆಬ್ರವರಿಯಲ್ಲಿ ನಡೆಯುವ ಸಂಭವವಿದೆ.**

* ಪೂರ್ಣವಾಗಿ ಈ ವಜ್ರಮಹೋತ್ಸವ ಸ್ಮಾರಕಗಳ ರಚನಾಕಾರ್ಯ ಮುಗಿಯಲು ಇನ್ನೂ 1 ಕೋಟಿ ರೂಗಳು ಬೇಕಾಗುತ್ತದೆ.
* ಶ್ರೀ ಶ್ರೀಗಳವರ ಮಹಾತ್ಯಾಗದ ಸಂದೇಶವನ್ನು ಸಾರುವ ಈ ಮಹೋನ್ನತ ಸ್ಮಾರಕಗಳಿಗೆ ಎಲ್ಲರೂ ಉದಾರವಾಗಿ ನೆರವು-ಸಹಕಾರ ನೀಡಬೇಕಾಗಿ ಕೋರುತ್ತೇವೆ.

ಡಾ. ಎಂ. ಸಿ. ಮೋದಿ
ಅಧ್ಯಕ್ಷರು.

ಬಿ.ಎಸ್. ಮುದ್ದಪ್ಪ, ಐ.ಎ.ಎಸ್.(ನಿ), ಕಾರ್ಯಾಧ್ಯಕ್ಷರು.
ಎಸ್.ಎಸ್. ಹಸಬಿ,ಐ.ಪಿ.ಎಸ್(ನಿ.) ಕಾರ್ಯದರ್ಶಿಗಳು.

# ಸಿದ್ಧಗಂಗಾ

ಸಂಪುಟ 32 ಸಂಚಿಕೆ-12 ಡಿಸೆಂಬರ್-1996.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾವ್ಯವನು ಬರೆಯದೆ ಕವಿಗಳನು ನೀ ಬರೆದೆ
ಕಾವ್ಯ ಕವಿಗಳಿಗೆಲ್ಲ ಬದುಕಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪುಣ್ಯಪುರಾಣವೆ ಪೂಜ್ಯ ಶ್ರೀ ಚರಿತವೆ
ಮಾನವ್ಯದ ಮುನ್ನುಡಿಯೆ ನನ್ನ ತಂದೆ! ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಜೆ ಮುಂಜಾನೆಗಳ ಮಂಗಳದ ತಿಲಕವೆ
ನಂಜು ನೋವುಗಳುಂಡ ಶ್ರೀ ಶಿವನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಚ್. ವಿ. ವೀರಭದ್ರಯ್ಯ



## ಶ್ರೀವಾಣಿ

### ನಾಲ್ಕಾಣೆ-ಹನ್ನೆರಡಾಣೆ-

ಮನುಷ್ಯ ಸೃಷ್ಟಿಯ ಅನುಮೂಲ್ಯಸಂಪತ್ತು. ಅವನಲ್ಲಿ ವಾಕ್ ಶಕ್ತಿ, ಕ್ರಿಯಾಶಕ್ತಿ ಮತ್ತು ಇಚ್ಛಾಶಕ್ತಿಗಳಿವೆ. ಸೃಷ್ಟಿಯಲ್ಲಿರುವ ಎಲ್ಲ ಸಂಪತ್ತುಗಳಿಗಿಂತಲೂ ಶ್ರೇಷ್ಠನಾದ ಮನುಷ್ಯ ತನ್ನಲ್ಲಿ ಅಂತರ್ಗತವಾಗಿರುವ ನಿಧಿಯ ಸದುಪಯೋಗ ಮಾಡಿಕೊಳ್ಳುವುದೇ ನಿಜವಾದಪೂಜೆ. ಅದನ್ನೇ ಬಸವಾದಿ ಶರಣರು ಕಾಯಕದಾಸೋಹವೆಂದು ಕರೆದು ಗೌರವಿಸಿದರು. ಕಾಯಕದ ಮುಲಕ ವ್ಯಕ್ತಿ ತನ್ನ ಶಕ್ತಿ ಸಂವರ್ಧನೆಯಲ್ಲಿ ನಿರತನಾಗುವುದರ ಜೊತೆಗೆ ಸೃಷ್ಟಿಯಲ್ಲಿ ತಾನೊಂದು ಕಣ ಎಂಬ ನಿರಹಂಕಾರವನ್ನು ಅರಿತು ಬಾಳುವ ಕಲೆಯನ್ನು ಕಲಿತುಕೊಳ್ಳುತ್ತಾನೆ. ತನ್ನ ನಿಸ್ವಾರ್ಥದ ಗಳಿಕೆಯನ್ನು ಸೃಷ್ಟಿಗೇ ಅಂದರೆ ಸಮಾಜಕ್ಕೆ ಅರ್ಪಿಸುವುದರ ಮೂಲಕ ದಾಸೋಹಿಯಾಗುತ್ತಾನೆ. ತನ್ನ ಕಾಯಕದ ಸಮಸ್ತ ಇಂದ್ರಿಯ, ಕರಣಗಳನ್ನೆಲ್ಲ ನಿರಂತರ ಕ್ರಿಯಾಶೀಲಗೊಳಿಸುವುದರ ಮೂಲಕ ಧರ್ಮದ ಮರ್ಮವನ್ನರಿಯುವ ಜ್ಞಾನಿಯಾಗುತ್ತಾನೆ. ಭೂಮಿ ಹೇಮ, ಕಾಮಿನಿಗಳೆಲ್ಲ ತನ್ನೊಡವೆಗಳು "ತನ್ನೊಡವೆ ಎಂಬುದು ಜ್ಞಾನರತ್ನ" ಎಂಬುದನ್ನು ಕಂಡುಕೊಳ್ಳುತ್ತಾನೆ. ಸೃಷ್ಟಿಯ ಒಂದು ಕಣವಾದ ತಾನು ಅದಕ್ಕೆ ಋಣಿಯಾಗಿದ್ದೇನೆ ಎಂದರಿತು ಮಾತೃ, ಪಿತೃ, ಋಷಿ, ದೇಶ, ದೇವ ಋಣಗಳನ್ನು ತೀರಿಸುವಸಂಕಲ್ಪ ಮನಗಾಣುತ್ತಾನೆ. ತನ್ನೊಳಗಿನ ಬೆಳಕಿನಲ್ಲಿ ಹೊರಗನ್ನೆಲ್ಲ ಕಾಣುವುದಷ್ಟೆ ಅಲ್ಲ ಹೊರಗನ್ನೂ ಬೆಳಕಿನತ್ತ ನಡೆಸುವ ಶಕ್ತಿಶೀಲನಾಗುತ್ತಾನೆ. ಇನ್ನೊಂದನ್ನು ಅವಲಂಬಿಸದೆ ತನ್ನನ್ನೇ ಅವಲಂಬಿಸಿ ಹೆಜ್ಜೆಯಿಡುತ್ತಾನೆ. ಇದು ಶರಣಸಂಸ್ಕೃತಿ. ಆದರೆ ಎಲ್ಲದಕ್ಕೂ ನಾವು ಸರ್ಕಾರವನ್ನೇ ಅವಲಂಬಿಸುತ್ತ ನಡೆದಿದ್ದೇವೆ. ಇದು ಎಷ್ಟುಸರಿ? ಏಕೆಂದರೆ ಸರ್ಕಾರದ ಶಕ್ತಿ ನಾಲ್ಕಾಣೆ ಆದರೆ ಸಮಸ್ತ ಜನಕೋಟಿಯ ಶಕ್ತಿ ಹನ್ನೆರಡಾಣೆ. ಮಾನವನ ಶಕ್ತಿ ಕ್ರಿಯಾಶೀಲವಾಗದ ಹೊರತು ಜೀವನ ಸುಂದರವಾಗಲಾರದು. ಜನ ಜಾಗೃತರಾಗಬೇಕು. ತಮ್ಮಲ್ಲಿ ಹುದುಗಿರುವ ಸಂಪತ್ತನ್ನು ರಾಷ್ಟ್ರದ ಪ್ರಗತಿಗೆ, ಮಾನವ್ಯದ ಸಂವರ್ಧನೆಗೆ ವಿನಿಯೋಗಿಸುವ ವಿಚಾರಶೀಲರಾಗಬೇಕು.

ದಿನಾಂಕ 8.12.96 ರಂದು ಕುದೂರಿನಲ್ಲಿ ತಾಲ್ಲೂಕು ಶರಣ ಸಾಹಿತ್ಯ ಸಮ್ಮೇಳನದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

## ಆಗಿ ಹೋದ ಶಿವಶರಣರ ಲಾವಣಿ ಪದ್ಯ

ಗುರುಪುತ್ರಿ ಬಸಮ್ಮ ತಾಯಿ, ದೊಡ್ಡಕನ್ನಹಳ್ಳಿ, ತಪೋವನ ಕಾರ್ಮೆಲರಂ-ಅಂಚೆ
ಬೆಂಗಳೂರು-35.

ಕನ್ನಡ ನಾಡಿನ ಮುನ್ನಿನ ಶರಣೆಯರಾ
ನೀರ ಚರಿತ್ರೆಯ ಕೇಳಿದಿರಾ
ಧೀರ ಚರಿತ್ರೆಯ ಕೇಳುವಿರಾ ॥ಪ॥

ನಮ್ಮೀನಾಡಿನ ಹೊನ್ನಿನ ಬೀಡಿನ
ವೀರ ಚರಿತ್ರೆಯ ಕೇಳಿದಿರಾ
ಧೀರ ಚರಿತ್ರೆಯ ಕೇಳುವಿರಾ ॥ಅನು॥ಪ॥

ಪಟ್ಟೆ ಪಿತಾಂಬರವ ಬಿಟ್ಟು ಕೇಶರಾಶಿಯ ಉಟ್ಟು
ತಂದೆ ತಾಯಿಗಳ ಬಿಟ್ಟೊ ಭಸಿತ ರುದ್ರಾಕ್ಷಿಯ ಧರಿಸಿ
ಚನ್ನಮಲ್ಲಿಕಾರ್ಜುನನ ವರಿಸಿ ಕೌಶಿಕರಾಜನ ಧಿಕ್ಕರಿಸಿ
ಬೆತ್ತಲೆ ಕದಳಿಯ ಪೊಕ್ಕಳು ಮಹಾದೇವಿಯಕ್ಕಾ ॥ಚರಣ॥

ಬಸವಣ್ಣನ ಸತಿಯೂ ಮಹಾಮನೆಯ ಮತಿಯೂ
ಪತಿಯ ಕರೆಯ ಕೇಳಿ ಅಲ್ಲಿರುವ ಸಂಗಯ್ಯ
ಇಲ್ಲಿಲ್ಲವೆ ಎಂದೆಳುತ್ತಾ ಕರಡಿಷ್ಕ ಲಿಂಗದಿ ಬೆರೆದು
ಬೈಲಿಗೆ ಬೈಲಾದಳು ಆ ಮಹಾತಾಯಿ ನೀಲಮ್ಮಾ : :

ಅಜಗಣ್ಣನ ಲಿಂಗೈಕ್ಯದ ಸಂಗತಿಕೇಳಿ
ಬಹಳ ದುಃಖಿತಳಾಗಿರಲೂ ಪ್ರಭುದೇವರಾಗಮಿಸಿ
ಶರಣನಿಗೆ ಮರಣವಿಲ್ಲವೆಂದುಸುರಿ ಭ್ರಾಂತಿಯ ಬಿಡಿಸಿ
ಮಾರ್ಗವ ತೋರಿಸಿದಾ ಪ್ರಭುದೇವರಡಿ ವಿಡಿದು ಸ್ಥಿತಿ ಪಡೆದಾಳಾ
ಮುಕ್ತಾಯಿ : :

## ಶ್ರೀ ಸಿದ್ಧಲಿಂಗೇಶ್ವರ ವಚನ



ತಾಳಮರನ ಹಿಡಿದು ತನಿರಸವನ್ನುಂಬನ್ನಕ್ಕರ
ಬಾರದ ಭವದಲ್ಲಿ ಬಪ್ಪುದು ತಪ್ಪದು ನೋಡಾ
ತಾಳಮರನ ಹಿಡಿಯದೆ ತನಿರಸವ ಮುಟ್ಟದೆ
ಮೇಲಣ ಹಾಲ ಕುಡಿಯ ಬಲ್ಲಿರಾಗಿ
ನಿಮ್ಮ ಶರಣರು ಭವವಿರಹಿತರಯ್ಯಾ
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ !

ಶರೀರವನ್ನೇ ತಾನೆಂದು ತಿಳಿದುಕೊಂಡು ವಿಷಯ ಸುಖವನ್ನು ಯಥೇಚ್ಛವಾಗಿ ಸೇವಿಸುವವರು ಈ ಪ್ರಪಂಚದಲ್ಲಿ ಪುನಃ ಪುನಃ ಸಾಯುತ್ತಲೇ ಇರಬೇಕಾಗುವುದು. ಯಾವಾಗ ಯಾರು ಶರೀರದ ಮೋಹವನ್ನು ಬಿಟ್ಟು ಆತ್ಮಾಭಿಮಾನಿಗಳಾಗಿ ವಿಷಯ ರಸದ ಅಭಿಲಾಷೆ ಯಿಲ್ಲದೆ ಕೇವಲ ತಮ್ಮ ಬ್ರಹ್ಮರಂಧ್ರದಲ್ಲಿದ್ದ ಚಿದ್ರಸವನ್ನು ಪಾನಮಾಡು ವರೊ ಆಗಲೇ ಅವರು ಸಂಸಾರದಿಂದ ಬಿಡುಗಡೆಹೊಂದಿ ನಿಜಾನಂದವನ್ನು ಹೊಂದುವರು.

(ಕೃಪೆ-ಷಟ್‌ಸ್ಥಲ ಜ್ಞಾನಸಾರಾಮೃತ – ಶ್ರೀ ತೋಂ. ಸಿ. ಕೈಂ. ಸೇ. ಸಂಘ. ಎಡೆಯೂರು ಗದಗ )

## ಸಿದ್ಧಗಂಗಾ ಮಾಸ ಪತ್ರಿಕೆ

ಸಂಪಾದಕ ಮಂಡಳಿ

ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು.

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

ಎಂ. ರೇಣುಕಾರಾಧ್ಯ
ಸಹ ಸಂಪಾದಕರು

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

ಸಲಹಾ ಸಮಿತಿ

ಡಾ॥ ಎಂ. ಎನ್. ಚನ್ನಬಸಪ್ಪ
ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ
ಮುದ್ರಕರು

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯಸ್ಥಳ


### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಅಜೀವ ಸದಸ್ಯತ್ವ 500-00


## ಸಂಪಾದಕೀಯ

### ತಲೆದಂಡ

"ಹೊನ್ನಿನೊಳಗೊಂದೊರೆಯ, ವಸ್ತ್ರದೊಳಗೊಂದೆಳೆಯ, ಅನ್ನದೊಳಗೊಂದಗುಳ. ಇಂದಿಂಗೆ ನಾಳಿಂಗೆ ಎಂದು ಕೊಂಡೆನಾದೊಡೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ ತಲೆದಂಡ ತಲೆದಂಡ ಕೂಡಲಸಂಗಮದೇವ"– ಎನ್ನುತ್ತಾರೆ ಬಸವಣ್ಣನವರು ಸಾರ್ವಜನಿಕ ಸಂಪತ್ತಿನ ಬಗ್ಗೆ ನಮ್ಮ ಪೂರ್ವಿಕರಿಗಿದ್ದ ದೃಷ್ಟಿಯಿದು. ಅನ್ಯರ ಐಶ್ವರ್ಯವನ್ನು ನಾಯಿಮಾಂಸವೆಂದು ಪರಿಭಾವಿಸಿದ ಸಂಸ್ಕೃತಿ ಭಾರತೀಯರದಾಗಿತ್ತು. ವ್ಯಕ್ತಿಯ ಚಾರಿತ್ರ್ಯ, ಸಮಾಜದ ಚಾರಿತ್ರ್ಯವಾಗುತ್ತದೆಂಬ ಅರಿವಿತ್ತು. ಹಿರಿಯರಿಗೆ ಅದೇ ರಾಷ್ಟ್ರದ ನಿಜವಾದ ನಿಧಿ ಎಂದು ನಂಬಿನಡೆದರು. ಮನ, ವಚನ, ಕಾಯಗಳನ್ನು ಪಾರದರ್ಶಕವಾಗಿಟ್ಟುಕೊಂಡು ಬಾಳಿದ ಪ್ರಾಮಾಣಿಕರ ಪರಂಪರೆಯಲ್ಲಿ ಬಂದ ನಮ್ಮ ಜನನಾಯಕರು ರಾಷ್ಟ್ರದ, ರಾಜ್ಯದ ಆಡಳಿತ ಸೂತ್ರಗಳನ್ನು ಕೈಯ್ಯಲ್ಲಿ ಹಿಡಿದು ಮಾಡುತ್ತಿರುವುದಾದರೂ ಏನೂ? ಕೋಟಿ ಕೋಟಿರೂಗಳನ್ನು ಲೂಟಿಮಾಡುವುದರಲ್ಲಿ ಸ್ಪರ್ಧೆಗಿಳಿದಿದ್ದಾರೆ. ಅಧಿಕಾರ ಲಭ್ಯವಾಗುವುದೇ ಭ್ರಷ್ಟಾಚಾರಕ್ಕಾಗಿ ಎಂದು ನಂಬಿನಡೆದಿದ್ದಾರೆ. ನೀವು ಭ್ರಷ್ಟಾಚಾರ ಮಾಡುತ್ತೀರೆಂದು ಜನಾಭಿಪ್ರಾಯ ವಿದೆಯಲ್ಲಾ ಎಂದು ಪ್ರಶ್ನಿಸಿದರೆ, ಯಾರು ಭ್ರಷ್ಟಾಚಾರಿಗಳಾಗಿಲ್ಲ ಹೇಳಿ ಎಂದು ಮರು ಪ್ರಶ್ನೆ ಕೇಳುವುದರ ಮೂಲಕ ಲಜ್ಜೆಬಿಟ್ಟು ಹೆಜ್ಜೆಯಿಡುತ್ತಿದ್ದಾರೆ. ಯಾರ ಭಯವೂ ಇವರಿಗಿಲ್ಲವಾಗಿದೆ. ನ್ಯಾಯಾಂಗದ ಮೇಲೆಯೇ ಆಕ್ರಮಣ ನಡೆಸುವ ಭಂಡತನವನ್ನೀಗ ರೂಢಿಸಿಕೊಳ್ಳುತ್ತಿದ್ದಾರೆ. "ಭಾರತರತ್ನ"ರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರಂಥ, ಲಾಲ್‌ಬಹಾದ್ದೂರ್ ಶಾಸ್ತ್ರಿಯವರಂಥ ನಿಸ್ವಾರ್ಥ ಪ್ರಾಮಾಣಿಕ ಪರಿಶುದ್ಧ ಹಸ್ತರನ್ನೀಗ ಹಗಲು ಹನ್ನೆರಡು ಗಂಟೆಯಲ್ಲಿ ಪಂಜುಹಿಡಿದು ಹುಡುಕಬೇಕಾದ ಪರಿಸ್ಥಿತಿ ನಿರ್ಮಾಣ ಮಾಡಿದ್ದಾರೆ. ಜಗತ್ತಿನೆದುರು ಎದೆಸೆಟಿಸಿ ನಿಲ್ಲಲು ಅಳುಕಾಗುವಂತೆ ಮಾಡಿದ್ದಾರೆ. ಹೇಳುವವರಿಲ್ಲ, ಕೇಳುವವರಿಲ್ಲ. ಭ್ರಷ್ಟಾಚಾರದ ದಳ್ಳುರಿಯಲ್ಲಿ ಭಾರತೀಯ ಬೆಂದು ಹೋಗುತ್ತಿದ್ದಾನೆ, ಸುಟ್ಟು ಸೀದು ಹೋಗುತ್ತಿದ್ದಾನೆ, ಸಾರ್ವಜನಿಕ ಕ್ಷೇತ್ರವಿಂದು ವಿಷವರ್ತುಲವಾಗಿದೆ. ಪ್ರಾಮಾಣಿಕರು ಅಸಹಾಯಕರಾಗುತ್ತಿದ್ದಾರೆ. ತಲೆದಂಡ ಕೊಡುತ್ತಿದ್ದಾರೆ. ಪ್ರಜಾಪ್ರಭುತ್ವ ಅರ್ಥಕಳೆದು ಕೊಳ್ಳುತ್ತಿದೆ. ಪ್ರಜಾಪ್ರತಿನಿಧಿಗಳು ಪ್ರಜೆಗಳ ಸೇವಕರಾಗುತ್ತಿಲ್ಲ, ಪ್ರಜಾ ಭಕ್ಷಕರಾಗಿ ಮಾರ್ಪಡುತ್ತಿದ್ದಾರೆ. ಇದಕ್ಕಿಂತ ಘೋರದುರಂತ ಮತ್ತೊಂದಿಲ್ಲ. ಕ್ಯಾನ್ಸರ್ ದೊಡ್ಡ ರೋಗವಲ್ಲ. ಏಡ್ಸ್‌ಕೂಡಾ ದೊಡ್ಡ ರೋಗವೆನಿಸದು. ಅವುಗಳಿಂದ ಪಾರಾಗ ಬಹುದೆಂಬುದನ್ನು ವೈದ್ಯಕೀಯ ವಿಜ್ಞಾನ ಹೇಳುತ್ತಿದೆ. ಆದರೆ ಭ್ರಷ್ಟಾಚಾರದಿಂದ ರಾಷ್ಟ್ರಮುಕ್ತವಾಗುವ ಬಗೆಹೇಗೆ? ಬಸವಣ್ಣನವರಂಥ ಮಹಾನುಭಾವ ಮತ್ತೊಮ್ಮೆ ಹುಟ್ಟಿಬರಬೇಕಾಗಿದೆ. ಕಾಯಕಬೇಕು ಅಂತಹ ಮಹಾಪುರುಷನ ಪುನರವತಾರಕ್ಕೆ.


'ಸಿದ್ಧಗಂಗಾ ಮೂವತ್ತೆರಡು ವರ್ಷಗಳನ್ನು ದಾಟಿ ಮೂವತ್ಮೂರಕ್ಕೆ ಅಡಿಯಿಡುತ್ತಿರುವ ಸಂದರ್ಭದಲ್ಲಿ ಪತ್ರಿಕೆಯ ಸಂವರ್ಧನೆಗೆ ಸಹಕರಿಸಿದ ಬರಹಗಾರರಿಗೆ, ಜಾಹಿರಾತುದಾರರಿಗೆ, ಪ್ರಕಾಶಕರಿಗೆ, ಸಹ-ಸಂಪಾದಕರಿಗೆ, ಮುದ್ರಣಾಲಯದವರಿಗೆ, ಚಂದಾದಾರರಿಗೆ, ಆಜೀವಸದಸ್ಯರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನರ್ಪಿಸುತ್ತ ಮುಂದೆಯೂ ಸಹಕಾರವನ್ನು ಕೋರುತ್ತದೆ.

## ಹಚ್ಚೇವು ಕನ್ನಡದ ದೀಪ

ಹಚ್ಚೇವು ಕನ್ನಡದ ದೀಪ,
ಕರುನಾಡ ದೀಪ ಸಿರಿನುಡಿಯದೀಪ
ಒಲವೆತ್ತಿ ತೋರುವಾ ದೀಪ ||ಹಚ್ಚೇವು||

ಬಹು ದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು|
ಎಲ್ಲೆಲ್ಲಿ ಕನ್ನಡದ ಕಂಪ ಸೂಸಲಲ್ಲಲ್ಲಿ ಕರಣ ಚಾಚೇವು|
ಕನ್ನಡದ ಕಳೆಯ ಕೆಚ್ಚೇವು
ಮರತೇವು ಮರವ, ತೆರದೇವು ಮನವ ಎರದೇವು ಒಲವ ಹಿಡಿನೆನಪ||
ನರನರವನೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದದೀಪ |೧||

ಕಲ್ಪನೆಯ ಕಣ್ಣು ಹರಿವನಕ ಸಾಲು
ದೀಪಗಳ ಬೆಳಕು ಬೀರೇವು |
ಹಚ್ಚಿರುವ ದೀಪದಲಿ ತಾಯ ರೂಪ
ಅಚ್ಚಳಿಯದಂತೆ ತೋರೇವು |
ಒಡಲೊಡಲ ಕೆಚ್ಚಿನಾ ಕಿಡಿಗಳನ್ನು ಗಡಿನಾಡಿನಾಚೆ ತೂರೇವು|
ಹೊಮ್ಮಿರಲು ಪ್ರೀತಿ, ಎಲ್ಲಿಯದು ಭೀತಿ, ನಾಡೊಲವೆ ನೀತಿ, ಹಿಡಿನೆನಪ||
ಮನೆ ಮನೆಗಳಲ್ಲಿ, ಮನ ಮನಗಳಲ್ಲಿ ಹಚ್ಚೇವು ಕನ್ನಡದ ದೀಪ ||೨||

ಕರುನಾಡಿನರಿವ ತೆರೆಶೀವಿ ಭಾವದಲಿ ಜೀವನಾಡಿ ನುಡಿಸೇವು|
ತೆರೆ-ತೆರೆದ ಕಣ್ಣಿನಲ್ಲಿ ನೇಹವೆರೆದು
ನವ ಜ್ಯೋತಿಯನೇ ಮುಡಿಸೇವು
ನಮ್ಮನ್ನಪುಂಡು ಅನ್ಯಾಯಗೈಯುವಂಥವರ ಹುಚ್ಚು ಬಿಡಿಸೇವು |
ಇಹುದೆಮಗೆ ಛಲವು, ಕನ್ನಡದ ಬಲವು ಕನ್ನಡದ ಒಲವು, ಹಿಡಿನೆನಪ|
ನಮ್ಮೆದೆಯ ಕೆಚ್ಚುನೆಚ್ಚುಗಳನೂಡಿ ಹಚ್ಚೇವು ಕನ್ನಡದ ದೀಪ ||೩||

ನಮ್ಮವರು ಗಳಿಸಿದಾ ಹೆಸರ ಉಳಿಸ
ಲೆಲ್ಲಾರು ಒಂದುಗೂಡೇವು|
ನಮ್ಮೆದೆಯ ಮಿಡಿಯುವೀ ಮಾತಿನಲ್ಲಿ
ಮಾತೆಯನು ಪೂಜೆ ಮಾಡೇವು |
ನಮ್ಮುಸಿರ ತೀಡುವೀ ನಾಡಿನಲ್ಲಿ
ಮಾಂಗಲ್ಯ ಗೀತೆ ಹಾಡೇವು |
ಹೊರೆದೇವು ಮರಳು, ಕಡೆದೇವು ಇರುಳ, ಪಡೆದೇವು ತಿರುಳ ಹಿಡಿನೆನಪ
ಕರುಳೆಂಬ ಕುಡಿಗೆ ಮಿಂಚನ್ನೆ ಮುಡಿಸಿ ಹಚ್ಚೇವು ಕನ್ನಡದ ದೀಪ |೪||

ಡಿ.ಎಸ್. ಕರ್ಕಿ

## ನೈತಿಕ ರಂಗದಲ್ಲಿ ಬಸವನ ವಿಚಾರವಾದ

**ಶರಣ ಸಂದೇಶ**

ಕೃಷಿಕೃತ್ಯಕಾಯಕದಿಂದಾದಡೇನು ?
ತನು ಮನ ಬಳಲಿಸಿ, ತಂದು ದಾಸೋಹ ಮಾಡುವ
ಪರಮ ಸದ್ಭಕ್ತನ ತೋರಯ್ಯನನಗೆ
ಅದೆಂತೆನೆ, ಆತನ ತನುಶುದ್ಧ ಆತನ ಮನಶುದ್ಧ,
ಆತನ ನಡೆ ಶುದ್ಧ, ನುಡಿಯೆಲ್ಲ ಪಾವನವು,
ಆತಂಗೆ ಉಪದೇಶ ಮಾಡಿದಾತನೇ ಪರಮ ಸದ್ಗುರು,
ಅಂತಪ್ಪ ಸದ್ಭಕ್ತನಮನೆಯ, ಕೈಲಾಸವೆಂದುಹೊಕ್ಕು,
ಲಿಂಗಾರ್ಚನೆಯಮಾಡುವ, ಜಂಗಮವೇ ಜಗತ್ ಪಾವನ.
ಇಂತಪ್ಪವರ, ನಾನು ನೆರೆನಂಬಿ, ನಮೋನಮೋ ಎಂದೆಂಬೆನಯ್ಯ
ಕೂಡಲಸಂಗಮದೇವ

—ಬಸವೇಶ್ವರರು

**ಮೊದಲ ಮಾತು**

ಸಾವಿರಾರು ವರ್ಷಗಳಿಂದ ಹಿಂದೂ ಸಂಸ್ಕೃತಿಯಲ್ಲಿ ಪರಂಪರಾನುಗತವಾಗಿ ಧಾವಿಸಿಬಂದ, ವಿಚಾರಧಾರೆಗೆ ಹೊಸ ತಿರುವು, ಹೊಸ ರೂಪ ಕೊಟ್ಟವರು ಬಸವಣ್ಣನವರು. ವೇದ, ಆಗಮ, ಶೃತಿ, ಸ್ಮೃತಿ, ಪುರಾಣಾದಿಗಳಿಗೆ ಮೊರೆ ಹೊಗದೆ, ಸ್ವತಂತ್ರ ವಿಚಾರಮಾರ್ಗವನ್ನು ಪ್ರಾರಂಭಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ದಿ ಲ್ಯಾಂಡ ಆಫ್ ಲಿಂಗಮ್ ಅನ್ನುವ ಪುಸ್ತಕದಲ್ಲಿ Whatever the legends may say Basava is the first Indian free thinker ದಂತಹ ಕಥೆಗಳು ಏನನ್ನೇ ಹೇಳಲಿ, ಬಸವಣ್ಣನವರು ಭಾರತೀಯರಲ್ಲಿ ಮೊಟ್ಟಮೊದಲನೆ ಸ್ವತಂತ್ರ ವಿಚಾರವಾದಿ ಎಂದು ಕರೆದ ಮಾತನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು.

**ಇಂದು ನೈತಿಕ ವಿಚಾರಗಳ ಅವಶ್ಯಕತೆ.**

ಆಧುನಿಕ ಯಾಂತ್ರಿಕ ಮತ್ತು ಭೌತಿಕ ಯುಗಕ್ಕೆ, ಎಂದಿಗಿಂತಲೂ ಇಂದು ಬಹಳ ಅನಿವಾರ್ಯವಾಗಿದೆ. ಇಂದಿನ ಅಶಾಂತಿ-ಅತೃಪ್ತಿಗಳಿಗೆ ಕಟ್ಟು-ನಿಟ್ಟುಗಳಿಲ್ಲದೇ ಸ್ವೇಚ್ಛೆಯ ಜೀವನವೇ ಮೂಲ ಕಾರಣವಾಗಿದೆ. (ಜೀವನಕ್ಕೆ ಆದರ್ಶ-ಶ್ರೇಷ್ಠ ಮೌಲ್ಯಗಳ ಕೊರತೆಯೆ ಕಾರಣವಾಗಿದೆ ತತ್ವಜ್ಞಾನಿ ಸಾಕ್ರೆಟಿಸ್‌ನುಕೊಟ್ಟ ಅಂದಿನಯುಗದ ಚಿತ್ರ. ಬಸವಣ್ಣನವರು ತಮ್ಮ ಒಂದು ವಚನದಲ್ಲಿ ನಿರೂಪಿಸಿದ, ೧೨ನೇ ಶತಮಾನದ ಸಮಾಜ ಸ್ವರೂಪ ಹಾಗೂ ಶ್ರಮ ನಾವುಕಾಣುವ ನಮ್ಮ ಸಮಾಜ ಚಿತ್ರಗಳಲ್ಲಿ ಅಷ್ಟು ಬದಲಾವಣೆ ಕಾಣುವುದಿಲ್ಲ. ಉದಾಹರಣೆಗೆ ಅಣ್ಣನವರ ವಚನವನ್ನೇ ತೆಗೆದುಕೊಳ್ಳೋಣ.

ಒಲೆ ಹತ್ತಿ ಉರಿದೊಡೆ ನಿಲಬಹುದಲ್ಲದೆ,
ಧರೆಹತ್ತಿ ಉರಿದೊಡೆ ನಿಲಬಹುದೆ;
ಏರಿ ನೀರುಂಬಡೆ; ಬೇಲಿ ಕೆಯ್ಯ ಮೇವಡೆ-
ನಾರಿ ತನ್ನ ಮನೆಯಲ್ಲಿ ಕಳವೊಡೆ,
ತಾಯಿಯ ಮೊಲೆಹಾಲು ನಂಜಾಗಿ ಕೊಲುವಡೆ,
ಇನ್ಯಾರಿಗೆ ದೂರುವೆ ಕೂಡಲಸಂಗಮದೇವ.

ಎಂಥ ವಿಚಿತ್ರ ಸಂಗತಿಯಿದು. ಯಾರು ಯಾವ ಕೆಲಸವನ್ನು ಮಾಡಿ ವ್ಯಕ್ತಿ ಸಮಾಜದ ಒಳಿತನ್ನು ಮಾಡಬೇಕೋ, ಅವರೇ ವಿನಾಶಕ್ಕೆ ಕಾರಣವಾಗುವ ಹಾಗೆ ವರ್ತಿಸಿದರೆ, ಯಾರು ಯಾರಲ್ಲಿ ದೂರಿಕೊಳ್ಳಬೇಕು ? ಇಂದಿನ ನಮ್ಮ ಜೀವನ ಹಾಗಾಗಿಲ್ಲವೆ ? ಸಮಾಜದ ಮುಖ್ಯ ಘಟಕಗಳಾದ ಆರೋಗ್ಯ, ನ್ಯಾಯ ವ್ಯಾಪಾರ, ರಕ್ಷಣೆ ಮತ್ತು ಶಿಕ್ಷಣ ರಂಗದಲ್ಲಿ ಇಂದಿನ ಸ್ಥಿತಿಯನ್ನು ವಿಶ್ಲೇಷಿಸೋಣ. ರೋಗಿಯನ್ನು ಪರೀಕ್ಷಿಸಿ, ಸರಿಯಾದ ಔಷಧ ಕೊಟ್ಟು ಅವನ ಆರೋಗ್ಯವನ್ನು ದಯಪಾಲಿಸುವವರು ವೈದ್ಯ. ಅದು ಅವನ ಆದ್ಯ ಕರ್ತವ್ಯ. ಆದರೆ ಇಂದಿನ ಸ್ಥಿತಿಯೇನಾಗಿದೆ. ? ವೈದ್ಯರು ಹೆಚ್ಚುತ್ತಿದ್ದಾರೆ. ರೋಗಗಳು ಹೆಚ್ಚುತ್ತಿವೆ. ರೋಗಿಯ ಬಗ್ಗೆ ಅನುಕಂಪವಿಲ್ಲ. ವೈದ್ಯನಿಗೆ ಇರುವುದು ತನ್ನ ಹಣದ ಗಳಿಕೆಯ ಬಗ್ಗೆ. ವೈದ್ಯನಿಗೆ ರೋಗಿಯೇ ದೇವರಲ್ಲವೇ ? ಹಣದ ದಾಹದಲ್ಲಿ, ಅವನನ್ನು ದೇವರೆಂದು ಕಾಣುವುದು ಬಿಡಲಿ; ಅವನೋರ್ವ ಮನುಷ್ಯ ಎನ್ನುವುದು ಇಂದು ಮರೆಯಲಾಗಿದೆ. ಇಲ್ಲಿ ಯಾರೋ, ಓರ್ವ ವೈದ್ಯರನ್ನಾಗಲಿ, ಅಥವಾ ವೈದ್ಯಕೀಯ ವರ್ಗದವರನ್ನಾಗಲಿ ಟೀಕಿಸುತ್ತಿಲ್ಲ, ಇದಕ್ಕೆ ಬೆರಳ ಮೇಲೆತ್ತಿ ಎಣಿಸುವಷ್ಟು ಅಪವಾದ ವ್ಯಕ್ತಿಗಳೂ ಇದ್ದಾರೆ. ಆದರೆ ಒಟ್ಟಾರೆ ವಾಸ್ತವಿಕ ಸಂಗತಿಯನ್ನು ಅಲ್ಲಗಳೆಯಲಿಕ್ಕೆ ಆಗದು.

ಜೀವನದ ಪವಿತ್ರರಂಗವೆಂದರೆ ನ್ಯಾಯಾಲಯಗಳು, ಪ್ರತಿಯೊಬ್ಬರು ತಮಗೆ ದೊರಕಬಹುದಾದ ನ್ಯಾಯವನ್ನು ಪಡೆಯಲು ಧಾವಿಸುತ್ತಾರೆ. ಅನ್ಯಾಯವಾದಾಗ ನ್ಯಾಯವನ್ನು ದಯಪಾಲಿಸುವುದು ನ್ಯಾಯವಾದಿಗಳ ಮೂಲಕರ್ತವ್ಯವಾಗಿದೆ. ಆದರೆ ವಾಸ್ತವತೆ ಬೇರೆಯಾಗಿದೆ. ಕೋರ್ಟುಗಳು, ನ್ಯಾಯಾಲಯಗಳು ಹೆಚ್ಚುತ್ತಿವೆ. ಆದರೆ ನ್ಯಾಯ ಮಾತ್ರ ಮಾಯವಾಗ ಹತ್ತಿದೆ. ಈ ಸಂದರ್ಭದಲ್ಲಿ ಮಹಾತ್ಮ ಗಾಂಧೀಯವರ ಮಾತನ್ನು ಸ್ಮರಿಸಿಕೊಳ್ಳಬಹುದು. The increase of Hospitals and the Courts is a sin for Civilization, ಆಸ್ಪತ್ರೆಗಳು ಮತ್ತು ನ್ಯಾಯಾಲಯಗಳು ಹೆಚ್ಚುತ್ತಿರುವುದು ಸಂಸ್ಕೃತಿಗೆ ಎಟುಕಿದ



ಪಾಪವೆಂದು ತಿಳಿಸಿದ್ದಾರೆ. ದವಾಖಾನೆಗಳು, ನ್ಯಾಯ ಮಂದಿರಗಳು ಬೇಡವೆಂದಿಲ್ಲ. ಅವುಗಳ ಹೆಚ್ಚಳ ಸರಿಯಲ್ಲವೆಂದು ತಿಳಿಸಿದ್ದಾರೆ. ಅದರ ಪರಿಣಾಮವನ್ನು ನಾವು ಈಗಾಗಲೇ ಕಾಣುತ್ತಿದ್ದೇವೆ.

ಅದೇ ರೀತಿಯಾಗಿ ವ್ಯಾಪಾರ ರಂಗ. ವ್ಯವಹಾರ ಸಮಾಜದ ಬೆನ್ನೆಲಬು ಸಮಾಜದ ಸ್ವಾಸ್ಥ್ಯಕ್ಕೆ ಬೇಕಾಗುವ ಸಾಮಾನುಗಳ ಖರೀದಿ ವಿಕ್ರಯ ಮತ್ತು ಸಂಗ್ರಹಣೆ ವ್ಯಾಪಾರಿಯ ಆದ್ಯಕರ್ತವ್ಯ ವ್ಯಾಪಾರಿ ಇಂದು ಹಣಗಳಿಸುವ ಯಂತ್ರವಾಗಿದ್ದಾನೆ. ಹಣ ಬರುವುದೇ ನ್ಯಾಯವೆಂದು ತಿಳಿದಿದ್ದಾನೆ. ಅದಕ್ಕೆ ಎಂತಹ ಕೆಲಸವನ್ನು ಸಹ ಮಾಡಲು ಹಿಂಜರಿಯುವುದಿಲ್ಲ. ಕಲಬೆರಕೆ ಮನೆಮಾತಾಗಿದೆ. ವ್ಯವಹಾರಕ್ಕೆ ಇರುವ ನೀತಿಯನ್ನು ಗಾಳಿಗೆ ತೂರಿಬಿಟ್ಟಿದ್ದಾನೆ ಬೆಳಗಾಗುವುದರೊಳಗೆ ಆತನು ಶ್ರೀಮಂತನಾಗಬೇಕು. ಲಕ್ಷಾಧೀಶನಾಗಬೇಕು, ಅಷ್ಟೈಶ್ವರ್ಯಪತಿಯಾಗಬೇಕು, ಅದು ಅವನ ಗುರಿ. ಅದಕ್ಕೆ ಮಾರ್ಗದ ಪರಿವೇ ಇಲ್ಲ. ಧನ ಪಿಶಾಚಿಯಾಗಿ, ಸಮಾಜಘಾತುಕನಾಗಿ, ರಾಕ್ಷಸಿಯ ವೃತ್ತಿಗೆ ಇಳಿದಿದ್ದಾನೆ. ಲಂಚಕ್ಕಾಗಿ ಸಮಾಜಗಳ್ಳರೊಡನೆ ಸಾಮೀಲಾಗುತ್ತಿರುವ ಆರಕ್ಷಕರಿದ್ದಾರೆ. ಇದನ್ನು ನೋಡಿದರೆ ಅಣ್ಣ ಬಸವಣ್ಣನವರ ವಚನಗಳಲ್ಲಿ ಪ್ರತಿಯೊಂದು ಮಾತಿಗೂ ನಾವು ತಕ್ಕ ಉದಾಹರಣೆಗಳನ್ನು ಕಾಣುತ್ತೇವೆ.

ಶಿಕ್ಷಣರಂಗ ಇದಕ್ಕೆ ಹೊರತಾಗಿಲ್ಲ. ಓದುವ ಹಂಬಲವಿಲ್ಲದ ಶಿಕ್ಷಕ. ಕಲಿಸಬೇಕೆಂಬ ಕುತೂಹಲವಿಲ್ಲದ ಶಿಕ್ಷಕ, ವಿದ್ಯಾರ್ಥಿಗಳ ಬಗ್ಗೆ ಅವರ ಭವಿಷ್ಯದ ಬಗ್ಗೆ. ಶೀಲ ಸಂವರ್ಧನೆಮಾಡಿ, ಮಾರ್ಗದರ್ಶನ ಮಾಡಬೇಕೆಂಬ ಬಯಕೆಯಂತೂ ಮೊದಲೇ ಇಲ್ಲ. ಒಂದು ಘಂಟೆ ಪಾಠ, (ಹೇಗಾದರೂ) ಸಿದ್ಧತೆಯಿಲ್ಲದೇ ಪಾಠ ಮಾಡಿದರೆ ಸಾಕು ಅದು ವಿದ್ಯಾರ್ಥಿಗಳ ಭಾಗ್ಯ! ಎಂಥ ವಿಪರ್ಯಾಸವಿದು?

ಇದಕ್ಕೆ ಮೂಲ ಕಾರಣವೇನು ? ಪ್ರತಿಯೊಬ್ಬ ಸಮಾಜ ಹಿತಚಿಂತಕನ ಮನಸ್ಸನ್ನು ಕಾಡುವ ಪ್ರಶ್ನೆ ಇದಾಗಿದೆ. ಬಸವಣ್ಣನವರು ಕೇವಲ ಜೀವನ ಸಮಾಜ-ಶಾಸ್ತ್ರಜ್ಞರಷ್ಟೇ ಅಲ್ಲ, ಅದರ ಸುಧಾರಕರು ಆಗಿದ್ದರು. ಅವರೋರ್ವ ಸಮಾಜ ತತ್ವಜ್ಞಾನಿಗಳಾಗಿದ್ದರು. ಗುರು-ಮಂತ್ರ ವೈದ್ಯ; ಜಂಗಮ, ಶಸ್ತ್ರವೈದ್ಯ ಎಂದು ಹೇಳಿದ ಅವರ ಮಾತಿನಲ್ಲಿ, ಕೇವಲ ಔಪಚಾರಿಕದಿಂದ, ಹೋಗದ ರೋಗಿಗಳಿಗೆ ಶಸ್ತ್ರಕ್ರಿಯೆ ಅನಿವಾರ್ಯವೆಂದು ಸೂಚಿಸಿದ್ದಾರೆ. ಅಂದು ಸಾಮಾಜಿಕ, ಆರ್ಥಿಕ, ಧಾರ್ಮಿಕ ಮೊದಲಾದ ರಂಗಗಳಲ್ಲಿ ಅನೇಕ ರೋಗ, ಉಲ್ಬಣ ರೋಗಗಳಿಂದ ಬಳಲುತ್ತಿದ್ದ ಸಮಾಜಕ್ಕೆ ಹೊಸ ಜೀವಕಳೆಯನ್ನು ಕೊಟ್ಟವರು ಬಸವಣ್ಣನವರು.

## ಚಿಕಿತ್ಸ ಸ್ವರೂಪ :

ಸಮಾಜ ಸುಧಾರಿಸಬೇಕೆನ್ನುವವರು, ಹೊಸ ಸಮಾಜ ನಿರ್ಮಾಣ ಮಾಡಬೇಕೆಂಬುವವರು, ನಿರ್ದಿಷ್ಟವಾದ, ಬಹು ಪ್ರಮುಖವಾದ ಹಲವಾರು ಗ್ರಹಿಕೆಗಳನ್ನು ಹೊಂದಿದವರಿರಬೇಕಾಗುತ್ತದೆ. ಮಾನವ ಸ್ವಭಾವದ ಅರಿವುಳ್ಳವರಾಗಬೇಕಾಗುತ್ತದೆ. ಇಲ್ಲವಾದರೆ, ದುಡುಕಿನಲ್ಲಿ ಅಂಧಾನುಕರಣೆಯನ್ನು ಮಾಡಿದ್ದಾದರೆ, ಸಮಾಜ ಪುರುಷನ ಬೆಳವಣಿಗೆಗೆ ಭಯಾನಕವಾಗಿ ಪರಿಣಮಿಸಬಹುದು ಸ್ವತಂತ್ರ ಬಂದು 49 ವರ್ಷಗಳನಂತರ, ಇಂದು ನಮ್ಮ ಪರಿಸ್ಥಿತಿಯೇನಾಗಿದೆ, ಎಂಥ ಜನರನ್ನು ನಾವು ನಿರ್ಮಿಸಿದ್ದೇವೆ,! ನಿರ್ಮಿಸುತ್ತಿದ್ದೇವೆ. ವಿಚಾರಿಸಲೂ ಭಯವಾಗುತ್ತಿದೆ. ದೇಶದ ಸಾತಂತ್ರ್ಯ ಸಾಧನೆ, ಸಿದ್ಧಿಯಲ್ಲಿ ಹೊಸ ಸಮಾಜರಚನೆ ಅದರ ಧ್ಯೇಯ. ಜನರು ಜನರೇ, ಆ ದೇಶದ ಸಂಪತ್ತು. ಆವರಶೀಲ ಸಂವರ್ಧನೆಯನ್ನು ಅಲಕ್ಷಿಸಿ ದೇಶವನ್ನು ಕಟ್ಟಬಹುದೇ? ಅದನ್ನರಿತು ಬಸವಣ್ಣನವರು ತಮ್ಮದೇ ಆದ ಕಲ್ಯಾಣ ರಾಜ್ಯದ, ಗುರಿಯನ್ನು ಇಟ್ಟುಕೊಂಡು ಹೊಸ ಸಮಾಜವನ್ನು ಕಟ್ಟಬಯಸಿದರು. ಅದಕ್ಕೆ ಭದ್ರಬುನಾದಿಯೆಂದರೆ ವಿಶ್ವಮಾನ್ಯವಾದ ನೀತಿಯಾಗಿತ್ತು. ಸಮಾಜಕ್ಕೆ ಮುಖ್ಯ ವ್ಯಕ್ತಿಯೇ ಘಟಕವಾದುದರಿಂದ, ವ್ಯಕ್ತಿಯ ಉನ್ನತಿಯೆಂದರೆ ಸರ್ವಾಂಗೀಣ ಉನ್ನತಿ. ಆತ್ಮೋನ್ನತಿಯ ತತ್ತ್ವವನ್ನು ಸಮಾಜದ ಕೊನೆಯ ಮನುಷ್ಯನವರೆಗೆ ಮುಟ್ಟಿಸಿದ ಕೀರ್ತಿ ಬಸವಣ್ಣನವರದು. ಮಾದಾರ ಚನ್ನಯ್ಯನಿಗೆ, ಡೋಹರಕಕ್ಕಯ್ಯನಿಗೆ, ಅಂಬಿಗರ ಚೌಡಯ್ಯನಿಗೆ, ಆತ್ಮೋನ್ನತಿಯ ಮಾರ್ಗವನ್ನು ಮುಕ್ತಾವಾಗಿಸಿದರು ಬಸವಣ್ಣನವರು.

ಶರಣ ಧರ್ಮ.

**" ಸಿದ್ಧಗಂಗಾ " ಆಜೀವ ಸದಸ್ಯರಲ್ಲಿ ಮನವಿ**

- ನಿಮ್ಮ ವಿಳಾಸ ಬದಲಾವಣೆಯಾದ ಕೂಡಲೆ ತಿಳಿಸಿ.
- ಇಲ್ಲವಾದರೆ " ಸಿದ್ಧಗಂಗಾ " ನಿಮ್ಮ ಕೈಸೇರುವುದಿಲ್ಲ.
- ಬದಲಾದ ವಿಳಾಸ ತಿಳಿಸುವಾಗ ಆಜೀವ ಸದಸ್ಯತ್ವದ
- ನಂಬರ್/ಸಂಖ್ಯೆ LM.................. ಸೂಚಿಸಲು ಮರೆಯದಿರಿ
- ಈ ಬಗ್ಗೆ ವ್ಯವಹರಿಸುವ ವಿಳಾಸ.

ಪ್ರಕಾಶಕರು,
" ಸಿದ್ಧಗಂಗಾ " ಮಾಸಪತ್ರಿಕೆ
ಶ್ರೀ ಸಿದ್ಧಗಂಗಾಮಠ, ತುಮಕೂರು-572 104.



## ವಿಶ್ವ ಪ್ರೇಮ ಸಾರಿದ ಯೇಸುಸ್ವಾಮಿ

ಮಹಾಂತೇಶ ಮಲ್ಲನಗೌಡರ, ಉಪನ್ಯಾಸಕರು, ಸರ್ಕಾರಿ ಕಾಲೇಜು, ಕೊಪ್ಪಳ ರಾಯಚೂರು.

ಕ್ರಿಸ್ತಧರ್ಮ ಜಗತ್ತಿನ ಪ್ರಾಚೀನ ಹಾಗೂ ಅತ್ಯಂತ ಪ್ರಮುಖ ಧರ್ಮಗಳಲ್ಲಿ ಒಂದು ಈ ಧರ್ಮದ ಸಂಸ್ಥಾಪಕರಾದ ಕ್ರಿಸ್ತನ ಜನ್ಮದಿನವನ್ನು ಶ್ರದ್ಧೆ, ಭಕ್ತಿ, ಸಂಭ್ರಮಗಳಿಂದ ವಿಶ್ವಾದ್ಯಂತ ಡಿಸೆಂಬರ್ 25ರಂದು ಸಾಂಪ್ರದಾಯಿಕವಾಗಿ ಆಚರಿಸಲ್ಪಡುತ್ತದೆ. ಕ್ರಿಸ್ತಧರ್ಮ ಎಲ್ಲರೂ ಅಣ್ಣ ತಮ್ಮಂದಿರು ಹಾಗೂ ಎಲ್ಲರೂ ದೇವರ ಮಕ್ಕಳು ಎಂಬ ತತ್ವಕ್ಕೆ ಹೆಚ್ಚಿನ ಮಹತ್ವ ಕೊಡುತ್ತದೆ. ಇದಲ್ಲದೆ ಆದು ಮಾನವನಿಗೆ ಮಾನವೀಯ ಮೌಲ್ಯಗಳಾದ ಪ್ರೀತಿ, ಕನಿಕರ, ದಯೆ, ಸತ್ಯ, ಪಾವಿತ್ರ್ಯತೆ ಮತ್ತು ಗೌರವಗಳನ್ನು ತಿಳಿಸಿ ಕೊಡುತ್ತದೆ.

ನಿನ್ನ ನೆರಹೊರೆಯವರನ್ನು ನಿನ್ನ ಹಾಗೆಯೇ ಪ್ರೀತಿಸು ಎಂದು ಹೇಳಿ ಮಾನವ ಪ್ರೀತಿಯನ್ನು ಬೋಧಿಸಿದ ಯೇಸುಕ್ರಿಸ್ತನ ಜೀವನ ಚರಿತ್ರೆಯನ್ನು ತಿಳಿದುಕೊಳ್ಳಲು ನಮಗೆ ಇರುವ ಮುಖ್ಯ ಆಧಾರಗಳೆಂದರೆ ಹೊಸ ಒಡಂಬಡಿಕೆಯ ನಾಲ್ಕು ಸುವಾರ್ತೆಗಳು ಮತ್ತಾಯ, ಮಾರ್ಕ್, ಲೂಕ್ ಮತ್ತು ಯೋಹಾನ.

ಕ್ರಿಶ್ಚಿಯನ್ ಧರ್ಮದ ಸಂಸ್ಥಾಪಕನಾದ ಜೇಸಸ್ ಕ್ರೈಸ್ತ ಯಹೂದಿಯಾಗಿದ್ದರು. ಬಾಲಕನಾಗಿದ್ದಾಗಿನಿಂದಲೂ ಧರ್ಮಗ್ರಂಥಗಳ ಮೇಲೆ ಹಾಗೂ ಅವುಗಳ ವ್ಯಾಖ್ಯಾನಗಳ ಮೇಲೆ ಆಸಕ್ತಿ ಹೊಂದಿದವನಾಗಿದ್ದನು. ಸತ್ಯ ಹಾಗೂ ದೇವರ ಪ್ರೀತಿ ಚಿಕ್ಕಂದಿನವನಾಗಿದ್ದಾಗಿನಿಂದಲೇ ಆತನ ಹೃದಯ ವ್ಯಾಪಿಸಿತ್ತು. ಧರ್ಮಾಧಿಕಾರಿಗಳು ಹಾಗೂ ಪಂಡಿತರುಗಳ ಕೂಡಾ ಆತನು ಇಂತಹ ವಿಷಯಗಳ ಮೇಲೆ ಸದಾ ಚರ್ಚೆಯಲ್ಲಿ ನಿರತನಾಗಿರುತ್ತಿದ್ದ.

ಜೇಸಸ್ ಬೆಥ್ಲೆಹೆಮ್ ನಗರದಲ್ಲಿ ವರ್ಜಿನ್ ಮೇರಿಯಂಳ ಉದರದಲ್ಲಿ ಜನಿಸಿದ. ಆತನ ತಂದೆಯಾದ ಯೂಸೂಪ್ ಬಡಗಿತನದ ವೃತ್ತಿಯಲ್ಲಿದ್ದ, ಜೇಸಸ್‌ನು ಕೂಡಾ ಅದೇ ವೃತ್ತಿಯಲ್ಲಿ ತನಗೆ ಮೂವತ್ತು ವರ್ಷ ಆಗುವವರೆಗೆ ಮುಂದುವರೆದ. ಆತನ ಸಮುದಾಯ ಆತನ ಪ್ರಾಮಾಣಿಕತೆ ಹಾಗೂ ಸತ್ಯವಂತಿಕೆಯಿಂದ ತುಂಬಾ ಪ್ರಭಾವಿತವಾಗಿತ್ತು.

ಜೇಸಸ್ ಮೂವತ್ತು ವರ್ಷದವನಿದ್ದಾಗ ಜನರಿಗೆ ಶಾಂತಿ, ಕ್ಷೇಮ, ದಯೆ, ಪರಿಶುದ್ಧ ನಡತೆಯ ಬಗ್ಗೆ ಬೋಧನೆ ಮಾಡಲು ಪ್ರಾರಂಭಿಸಿದ. ಬೈಬಲ್ಲಿನ ಪ್ರಥಮ ಭಾಗ ಆತನು ಶಾಂತಿದೂತನೆಂದು ಕರೆಯಲ್ಪಟ್ಟನೆಂದು ತಿಳಿಸುತ್ತದೆಯಲ್ಲದೆ ಆತನ ಕೀರ್ತಿ ಹಾಗೂ ವೈಭವ ಅಲ್ಲಿನ ಅಧಿಕಾರಿಗಳು ಆತನನ್ನು ದ್ವೇಷ ಮಾಡುವ ಹಾಗೆ ಮಾಡಿತು.

ಜೇಸಸ್ ಜೀವನದ ಅತ್ಯಂತ ಪ್ರಮುಖ ಘಟನೆಯೆಂದರೆ ಜೋರ್ಡಾನ್ ನದಿಯ ದಡದ ಮೇಲೆವಾಸಿಸುತ್ತಿದ್ದ ಜೋಹಾನನ್ನು ಭೇಟಿಯಾದದ್ದು. ಜೇಸಸ್ ಜೋರ್ಡಾನ್ ನದಿಯ ನೀರು ಕುಡಿದು ಜೋಹಾನನ ಅನುಯಾಯಿಯಾದ. ಯೇಸು ದೀಕ್ಷೆ-ಪಡೆದ ನಂತರ ಬೋಧನೆಗಾಗಿ ಸಂಚಾರ ಮಾಡಲು ಪ್ರಾರಂಭಿಸಿದನು. ನ್ಯಾಯ. ಪ್ರೀತಿ, ದಯೆಯಿಂದ ತುಂಬಿದ ದೇವರ ರಾಜ್ಯದ ಬಗ್ಗೆ ತಿಳಿಸಿ ಹೇಳಿದನು. ತಾನು ಬೋಧಿಸಿದ ಹಾಗೆಯೇ ಆತನು ಅತ್ಯಂತ ಸರಳ ಜೀವನ ಸಾಗಿಸಿದನಲ್ಲದೇ ಬಡವರ ಜೊತೆ ಯಾವುದೇ ಸಂಕೋಚವಿಲ್ಲದೆ ಕೂಡುತ್ತಿದ್ದನು.

ಜೇಸಸ್ ಬಹಳ ಕಾಲದವರೆಗೆ ಆ ಭಾಗದಲ್ಲಿ ಭೋಧನೆಯನ್ನು ಮಾಡುತ್ತಾ ಕಾಲಕಳೆದ. ಜುಡಿಯಾ ಮರುಭೂಮಿಯಲ್ಲಿ ನಲವತ್ತು ದಿನಗಳವರೆಗೆ ವಾಸಿಸಿದ. ಆ ಮರುಭೂಮಿಯಲ್ಲಿ ದುಷ್ಟಶಕ್ತಿಗಳ ತಾಣವೇಯಿದೆಯೆಂದು ಅಲ್ಲಿಯ ಜನರನಂಬಿಕೆಯಾಗಿತ್ತು. ಸೈತಾನನ ವಿರುದ್ಧ ಹೋರಾಟದಲ್ಲಿ ಗೆಲುವು ಪಡೆದ ಆತನು ಜನರ ಮನ ಪರಿವರ್ತನೆಗೆ ನಿರ್ಧರಿಸಿದ.

ಜೇಸಸ್ ಮೂಢ, ಅನಕ್ಷರಸ್ಥ ಹಾಗೂ ಸಾಮಾನ್ಯ ಜನರಿಗೆ ಪ್ರೀತಿ, ದಯೆ, ಕ್ಷಮೆ, ಹಾಗೂ ಸಹೋದರ ಭಾವನೆಯನ್ನು ತಿಳಿಸಿ ಹೇಳಿದ. ಆತನು ನಿನಗೆ ಪ್ರೀತಿ ಮಾಡಲು ಮಾತ್ರ ಹಕ್ಕುಂಟು. ನಿನ್ನ ನೆರೆ-ಹೊರೆಯುವರನ್ನು ನಿನ್ನಹಾಗೆ ಪ್ರೀತಿಸು. ಸ್ವಾರ್ಥಿಯಾಗಬೇಡ. ಎಂದು ಬೋಧಿಸಿ ದೇವರ ಸಾಮ್ರಾಜ್ಯದ ಬಗ್ಗೆ ಜನರಿಗೆ ತಿಳಿಸಿ ಹೇಳಿದ. ಯೇಸುವಿನ ಶುದ್ಧ ಹಸ್ತ ಸ್ಪರ್ಶ ಅನೇಕ ರೋಗಿಗಳ ರೋಗವನ್ನು ವಾಸಿ ಮಾಡಿತು. ಆತನ ದಿವ್ಯ ಉಪದೇಶ ಜನರ ಮನಸ್ಸನ್ನು ಆವರಿಸಿದ ಕೊಳೆಯನ್ನು ಕಳೆಯತೊಡಗಿತು. „ದೇವರ ಲೋಕವನ್ನೂ ಧರ್ಮವನ್ನೂ ಬಯಸಿರಿ. ಇನ್ನೊಬ್ಬನ ತಪ್ಪನ್ನು ಶೋಧಿಸಬೇಡಿರಿ, ನಿಮ್ಮನ್ನು ಶೋಧಿಸಿಕೊಳ್ಳಿರಿ. ಇತರರನ್ನು ಕ್ಷಮಿಸಿರಿ. ದೇವರಿಗೆ ದೇವರ ನಾಣ್ಯದಲ್ಲಿ ಕಾಣಿಕೆ ಸಲ್ಲಿಸಿ. ಹೀಗೆ ಬೋಧಿಸಿ ಆಗ ಸಮಾಜದಲ್ಲಿ ಪ್ರಮುಖ ಸ್ಥಾನ ಪಡೆದಿದ್ದ ಪಾದ್ರಿಗಳನ್ನು ನೀವು ಜ್ಞಾನಿಗಳೆಂದು ಹೇಳಿಕೊಳ್ಳುತ್ತಾ ಜ್ಞಾನಕೋಶದ ಬೀಗದ ಕೈಯನ್ನು ಹಾಳು ಮಾಡುವಿರಿ. ನೀವು ಅಲ್ಲಿಗೆ ಹೋಗಲಿಲ್ಲ, ಹೋಗುವವರನ್ನು ಬಿಡಲಿಲ್ಲ. ಎಂದು ಹೇಳಿ ಆಗಿನ ಪುರೋಹಿತ ಶಾಹಿಯಲ್ಲಿ ಅಡಗಿದ ನ್ಯೂನ್ಯತೆಯನ್ನು ಖಂಡಿಸಿದನು. ಇದೆಲ್ಲದರಿಂದ ಆಡಳಿತವರ್ಗದ ಜನರ ಹಾಗೂ ರಾಜನ ದ್ವೇಷವನ್ನು ಕಟ್ಟಿಕೊಂಡನು.

ಆತನ ಅನುಯಾಯಿಗಳು ಹೆಚ್ಚಾದಂತೆ ಹಾಗೂ ಆತನ ಹೆಸರು ಬೆಳೆದಂತೆ ಆತನಿಗೆ ಉನ್ನತ ವರ್ಗದಲ್ಲಿ ವೈರಿಗಳು ಹುಟ್ಟಿಕೊಂಡರು. ಆತನು ಕ್ರೂರನೆಂದು ದೇವರ ದ್ರೋಹಿಯೆಂದು ಜರಿದರು. ಹೇರೂಡ ರಾಜ ಹಾಗೂ ಪಾರ್ಶಿಗಳು ಆತನನ್ನು ಸುಳ್ಳು ಪ್ರವಾದಿಯೆಂದು ಹೇಳಿದರು.



ಜೇಸಸ್ ಒಂದುದಿನ ಊಟಕ್ಕೆ ಕುಳಿತಾಗ ತನ್ನ ಅನುಯಾಯಿಗಳಿಗೆ "ನನ್ನನ್ನು ವೈರಿಗಳಿಗೆ ಹಿಡಿದುಕೊಡುವ ಸಮಯ ಬಂದಿದೆ" ಎಂದು ತಿಳಿಸಿದ. ಹಾಗೂ ಅವನು ಅದರಬಗ್ಗೆ ನಿಶ್ಚಿಂತ ಹಾಗೂ ನಿರ್ಭಯನಾಗಿದ್ದ. ಸೈನಿಕರೊಡಗೂಡಿ ಬಂದ ದ್ರೋಹಿ ಜೂಡಾಸ ಜೇಸಸ್‌ನನ್ನು ಸೆರೆಹಿಡಿದುಕೊಟ್ಟ. ಅದಕ್ಕೆ ಅಡ್ಡಿಬಂದ ತನ್ನ ಅನುಯಾಯಿ ಪತ್ರಾಸನಿಗೆ ಜೇಸಸ್ ಹೇಳಿದ "ನಿನ್ನ ಖಡ್ಗವನ್ನು ಎತ್ತಬೇಡ. ನನ್ನನ್ನು ನಾನೇ ಬಲಿದಾನ ಕೊಡುವ ಕಾಲ ಬಂದಿದೆ.

ಅಧಿಕಾರಿಗಳು ಆತನ ವಿರುದ್ಧ ಸುಳ್ಳುಆಪಾದನೆಗಳನ್ನು ಮಾಡಿ ರೋಮ ಗವರ್ನರ್ ಪಾಂಟಿಯಸ್ ಪಲಾಟಿನಲ್ಲಿ ಕರೆದೊಯ್ದರು. ರಾಜ ದ್ರೋಹದ ಆಪಾದನೆ ಹೊರಿಸಿದರು. ಕೊನೆಗೆ ಯೇಸುಕ್ರಿಸ್ತನನ್ನು ಕ್ರಿಸ್ತಶಕ 30 ರಲ್ಲಿ ಸಿಲುಬೆಗೇರಿಸಲಾಯಿತು. ಸಿಲುಬೆಗೇರಿಸುವ ಸಮಯದಲ್ಲಿ ಜೇಸಸ್ ಹೇಳಿದ "ದೇವರೆ, ಅವರನ್ನು ಕ್ಷಮಿಸು. ಅವರನ್ನು ಮಾಡುತ್ತಿದ್ದಾರೆಂದು ಅವರಿಗೇ ಗೊತ್ತಿಲ್ಲ."

ಈ ರೀತಿ ಪ್ರೀತಿ ಪ್ರೇಮವನ್ನು ಪ್ರಸಾರ ಮಾಡಿದ. ಜೀವ ಕ್ರೂರವಾಗಿ ಕೊನೆಗಾಣಬೇಕಾಯಿತು. ಹೂವಿನ ಕೀರಿಟ ಧರಿಸಬೇಕಾದ ತಲೆಗೆ ಮುಳ್ಳಿನ ಕೀರಿಟ ತೊಡಿಸಿ ಹಿಂಸೆ ಮಾಡಲಾಯಿತು.

ಜೇಸಸ್ ಅನುಯಾಯಿಗಳು ತಮ್ಮನ್ನು ತಾವೇ ಕ್ರಿಶ್ಚಿಯನ್ನರು ಎಂದು ಕರೆದುಕೊಂಡರು. ಗ್ರೀಕ್ ಶಬ್ದ ಕ್ರಿಸ್ತೋಸ್ ಎಂದರೆ ಅಭ್ಯಂಜನ ಎಂದು ಅರ್ಥ. ಆತನ ತತ್ವಗಳ ಆಧಾರದ ಮೇಲೆ ಕ್ರಿಸ್ತ ಧರ್ಮ ಸ್ಥಾಪನೆಗೊಂಡಿದೆ.

ಜಗತ್ತಿನಾದ್ಯಂತ ವ್ಯಾಪಿಸಿರುವ ಈ ಧರ್ಮದ ಅನುಯಾಯಿಗಳು ಭಾರತೀಯ ಸಮಾಜದ ಮೇಲೂ ಪ್ರಭಾವ ಬೀರಿದ್ದಾರೆ. 1971ರ ಜನಗಣತಿಯ ಪ್ರಕಾರ ಶೇಕಡಾ 2.60 ಇರುವುದಾಗಿ ತಿಳಿದು ಬಂದಿದೆ. ಸುಮಾರು 1800 ವರ್ಷಗಳ ಹಿಂದೆ ಕ್ರಿಶ್ಚಿಯನರು ಭಾರತಕ್ಕೆ ಬಂದಿದ್ದು ಈಗ 82 ಲಕ್ಷ ಜನಸಂಖ್ಯೆಯಿದೆಯೆಂದು ತಿಳಿದು ಬಂದಿದೆ.



## ರಾಜ್ಯೋತ್ಸವ-ನಿತ್ಯೋತ್ಸವ

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ ಅಂಚೆ-ಮುಚ್ಚಿನ-574295 ದಕ್ಷಿಣ ಕನ್ನಡ.

ನಮ್ಮ ಕನ್ನಡನಾಡನ್ನು ವಿಧಿವತ್ತಾಗಿ ವಿಭಜಿಸಿದಕಾರ್ಯ ಇತ್ತೀಚಿನದು. ಕನ್ನಡದ ಮೊದಲ ಕವಿಯೆನಿಸಿದ ನೃಪತುಂಗನು ಕ್ರಿಸ್ತಶಕಾರಂಭದಲ್ಲೇ ಕಾವೇರಿಯಿಂದ ಗೋದಾವರಿಯ ತನಕ ಬೇರು, ಬಿಳಲು ಬಿಟ್ಟಿದ್ದ ಈ ನಾಡಿನ ವಿಸ್ತಾರ, ವಿಶೇಷಗಳನ್ನು ಬಣ್ಣಿಸಿದ್ದ. ಕ್ರಿಸ್ತಪೂರ್ವ ಎರಡೂವರೆ ಶತಮಾನದ ಹಿಂದೆ ಚಿತ್ರದುರ್ಗದ ಬಳಿಯ ಬಂಡೆಯೊಂದರಲ್ಲಿ ಅಶೋಕ ಚಕ್ರವರ್ತಿ ಕೆತ್ತಿಸಿದ ಬ್ರಾಹ್ಮೀ ಲಿಪಿಯೇ ಮುಂದೆ ವಿಕಾಸ ಹೊಂದಿ ಕನ್ನಡದ ಸುಂದರ ಲಿಪಿಯಾಯಿತು ಎನ್ನುವುದು ಇತಿಹಾಸ ಸಂಶೋಧಕರ ಅಭಿಪ್ರಾಯ. ಹೀಗೆ ಅಕ್ಕರೆ ಕನ್ನಡದ ಸಕ್ಕರೆಯ ಅಕ್ಕರಗಳಿಗೆ ಸುದೀರ್ಘ ಇತಿಹಾಸದ ಹಿನ್ನೆಲೆಯೂ ಇದೆ. ಈ ರಾಜ್ಯದ ಜ್ವಲಂತ ಇತಿಹಾಸಕ್ಕೆ ಎರಡು ಸಾವಿರ ವರುಷಗಳ ದಾಖಲೆಯೂ ಉಂಟು. ದೇಶ ವಿದೇಶದ ಪ್ರವಾಸಿಗಳಿಂದ ಇದರ ವಿಶೇಷತೆ ಹಾಡಿ ಹೊಗಳಲ್ಪಟ್ಟಿದೆ.

ನಮ್ಮ ಅಭಿಮಾನದ ಕನ್ನಡ ರಾಜ್ಯೋದಯವಾಗಿ ನಾಲ್ಕು ದಶಕಗಳೇ ತುಂಬಿವೆ. ಆದರೆ ಕನ್ನಡದ ಕವಿಯೊಬ್ಬರು, "ಕನ್ನಡಿಗ ನಿನಗೆ ನಿತ್ಯವೂ ನಿದ್ದೆ, ಒಂದು ದಿನ ಮಾತ್ರ ನೀ ನಿದ್ದೆಯಿಂದೆದ್ದೆ, ರಾಜ್ಯೋತ್ಸವದ ದಿನನೀ ಹಾಡಿ ಕುಣಿದು, ಮತ್ತೊಂದು ವರ್ಷ ಮಲಗಿದೆ ಮುಸುಕು ಹೊದ್ದು" ಎಂಬಂತೆ ವ್ಯಥೆ ಪಡುವ ಪರಿಸ್ಥಿತಿ ನಮ್ಮದಾಗಿದೆ. 'ನರಕಕ್ಕಿಳ್ಸಿ ನಾಲ್ಗೆ ಹೊಲಿದ್ರೂ ಮುಗ್ನಲ್ಲಿ ಕನ್ನಡ ಪದ ಹಾಡ್ತೀನಿ" ಎಂದು ರತ್ನನು ಶಪಥ ತೊಟ್ಟ ಈ ನಾಡಿನಲ್ಲಿ ನಮ್ಮ ಕನ್ನಡಾಭಿಮಾನವೀಗ ಪ್ರಶ್ನಾರ್ಹವಾಗಿದೆ. ನಾವು ಎಷ್ಟು ಕನ್ನಡ ಪುಸ್ತಕಗಳನ್ನು ಸಂಗ್ರಹಿಸಿ ಓದುತ್ತೇವೆ ಎಂದು ವಿಚಾರಿಸಿದರೆ ಇಲ್ಲಿ ಕನ್ನಡ ಪುಸ್ತಕೋದ್ಯಮ ಶೋಚನೀಯ ಸ್ಥಿತಿಯಲ್ಲಿದೆ. ನೆರೆಯ ಕೇರಳದಲ್ಲಿ ಪ್ರತಿಯೊಬ್ಬನೂ ಒಂದು ಪತ್ರಿಕೆ ಖರೀದಿಸಿ ಓದುತ್ತಾನೆ. ಅದರಿಂದ ಅಲ್ಲಿ ಪತ್ರಿಕೆಯ ಮಾರಾಟ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತದೆ. ಇದೇ ಕರ್ನಾಟಕದಲ್ಲಿ ಪರಿಸ್ಥಿತಿ ತದ್ವಿರುದ್ಧವಾಗಿದೆ.

ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು ಈ ಸಂಸ್ಕೃತಿಯ ಹವೆಯನ್ನು ಉಸಿರಾಡಿ ಈ ಸುಗಂಧಿತ ಮಣ್ಣಿನ ಕಣಗಳಿಂದ ಬದುಕಿನ ಜೀವವಾಹಿನಿ ಮಿಡಿಯುತ್ತಿರುವ ಒಂದು ಪುಟ್ಟಮಗುವನ್ನು "ಅಪ್ಪ ಅಮ್ಮ? ಮನೆಯಲ್ಲಿದ್ದಾರೆಯೆ?" ಎಂದು ಕೇಳಿ ನೋಡಿ. ಅಪ್ಪ ಅಮ್ಮ? ನನಗೆ ಅಪ್ಪ ಅಮ್ಮ ಇಲ್ಲ ಎನ್ನುತ್ತದೆ ಮಗು. ಹಾಗಾದರೆ ಮನೆಯಲ್ಲಿ ಇರುವವರು ಯಾರೆಂದು ಕೇಳಿದರೆ ಮಗು ತಟಕ್ಕನೆ ಹೇಳುತ್ತದೆ, ಅವರೆ ? ಅವರು ಮಮ್ಮಿ ಮತ್ತು ಡ್ಯಾಡಿ'



ಕನ್ನಡ ಭಾಷಾಭಿಮಾನದ ಉತ್ಕಟತೆ ಎಂದರೆ ಇನ್ನೊಂದು ಭಾಷೆಯ ವಿರೋಧ ಅಲ್ಲ. ಯಾವುದೇ ಭಾಷೆಯನ್ನು ವ್ಯಾವಹಾರಿಕವಾಗಿ ಕಲಿಯಬಹುದು. ಆದರೆ ಔಷಧಿಯೇ ಅನ್ನವಲ್ಲ. ನಾವೀಗ ನಮ್ಮ ಹೆತ್ತಕರುಳಿನ ನುಡಿಯನ್ನು ಕಡೆಗಣಿಸಿ ಎಳೆಯ ಮಗು ಇಂಗ್ಲೀಷಿನಲ್ಲೇ ತೊದಲು ನುಡಿಯಾಡಲು ಪ್ರಯತ್ನಿಸುತ್ತೇವೆ. ಶೋಚನೀಯ ಸ್ಥಿತಿಯಲ್ಲಿರುವ ಕನ್ನಡ ಶಾಲೆಗಳ ಉದ್ಧಾರ ನಮಗೆ ಬೇಕಾಗಿಲ್ಲ.

ನುಡಿ ಕನ್ನಡ, ನಡೆ ಕನ್ನಡವೆಂಬ ಪ್ರತಿಜ್ಞೆಗೆ ಬದ್ಧರಾಗಿ ಕನ್ನಡವೆಂದಾಗ ನಮ್ಮೆದೆ ಕುಣಿದಾಡಬೇಕು. ನಮ್ಮ ಔದಾಸಿನ್ಯದಿಂದಲೇ ವಿಶಾಲವಾಗಿ ಹರಡಿದ್ದ ನಾಡಿನ ಹರಹು ಕಿರಿದಾಗುತ್ತಾ ಬಂದಿತೋ ಏನೋ. ಸುಮಧುರವಾದ ಈ ನುಡಿ ಮುತ್ತಿನಿಂದಲೇ ಪದವಿ ಪರೀಕ್ಷೆಗಳಲ್ಲಿ ಮೇಲುಗೈ ಸಾಧಿಸಿದವರಿದ್ದಾರೆ. ಅನ್ಯ ಭಾಷೆಯವರಿಗೆ ಆಶ್ರಯ ನೀಡಿದ ಮಾತ್ರಕ್ಕೆ ನಮ್ಮ ನೆಲದಲ್ಲಿ ಪರಕೀಯರೇ ತುಂಬುತ್ತಾರೆಂಬುದು ಸರಿಯಾದ ಮಾತಲ್ಲ. ಕೇರಳಕ್ಕೆ, ತಮಿಳುನಾಡಿಗೆ ಹೋದರೆ ಅಲ್ಲಿ ಅಂಗಡಿಗಳ ಫಲಕ ಬೇರೊಂದು ಭಾಷೆಯಲ್ಲಿ ಕಾಣಸಿಗದು. ಕರ್ನಾಟಕದಲ್ಲಿ ಬೇಕೆಂದರೂ ಕನ್ನಡದಲ್ಲಿ ಕಾಣಸದು. ನಮ್ಮ ಭಾಷಾಭಿಮಾನ ಉಜ್ವಲಗೊಂಡಾಗ ಮಾತ್ರ ಈ ಭಾಷೆ, ಈ ನಾಡು ಸಮೃದ್ಧಿಯಾದೀತು. ಮರದ ನೆರಳಲ್ಲಿ ಗಿಡವಾಗಬಾರದೆಂಬ ಧೋರಣೆ ನಮಗಿಲ್ಲ. ಸಹೋದರರ ವಾತ್ಸಲ್ಯದಿಂದ ಎಲ್ಲರಿಗೂ ಆಶ್ರಯ ನೀಡಬಲ್ಲ ಉದಾರತನ ನಮ್ಮ ಎದೆಯಲ್ಲಿದೆ. ಆದರೆ ನಮ್ಮ ಮಾತೃನುಡಿ ನಮಗೇ ಬೇಡವೆನ್ನಿಸಿದರೆ ಯಾರನ್ನು ಏನನ್ನೋಣ?

ರಾಜ್ಯೋತ್ಸವ ಬರೆ ಒಂದು ದಿನದ ಆಡಂಬರವಾಗದೆ ನಮ್ಮ ಮನೆ, ಮನಗಳಲ್ಲಿ ಸಂಭ್ರಮಸಾಗರದ ಅಲೆಯೆಬ್ಬಿಸುವ ನಿತ್ಯೋತ್ಸವವಾಗಬೇಕು. ಈ ನುಡಿಯ ರಕ್ಷಣೆಗೆ ಅದನ್ನು ಬಳಸುವ ಮುಡಿಪನ್ನು ಧರಿಸಬೇಕು. ನಮ್ಮ ಪ್ರೇಕ್ಷಣೀಯ ಸ್ಥಳಗಳು ರಕ್ಷಣೆಯಿಲ್ಲದೆ ಮೂಲೆ ಗುಂಪಾಗಿವೆ ಕನ್ನಡದ ದೀಪ ಹಚ್ಚಬೇಕಾದ ಕೈಗಳು ಪ್ರತಿಭಾಪಲಾಯನ ಮಾಡಿ ಈ ನಾಡು ನುಡಿಯ ಅಭಿವೃದ್ಧಿಗೆ ಆಧಾರವಾಗುವ ಅವಕಾಶವನ್ನು ಕಳೆದು ಕೊಂಡಿವೆ. ಪ್ರತಿಭಾ ಸಂಪನ್ನರು ಈ ನಾಡನ್ನು ಸರ್ವತೋಮುಖ ಅಭಿವೃದ್ಧಿಗೊಳಿಸಬೇಕು ಕ್ಷಮಾಶೀಲತೆ, ದಾನ, ಧರ್ಮ, ದಯೆಗಳಲ್ಲಿ ಕನ್ನಡಿಗರ ಹಿರಿಯ ಗುಣವನ್ನು ಕಂಡವರು ಹುಟ್ಟಿದರೆ ಈ ನಾಡಿನಲ್ಲೆ ಹುಟ್ಟಬೇಕೆಂದು ಹಂಬಲಿಸಿದ್ದಾರೆ. ಇಂತಹ ಹಿರಿಮೆಯ ಪುನರಾವರ್ತನೆಯೇ ರಾಜ್ಯೋತ್ಸವದ ಹಿರಿಯ ಪಣವಾಗಲಿ. ●



# ವಿಶ್ವದಲ್ಲಿ ಭಾರತೀಯ ಸಂಸ್ಕೃತಿ -9

❀ ಎಚ್.ಎಸ್. ನರಸಿಂಹಜೀಯರ್, ಲಕ್ಷ್ಮಯ್ಯನ ತೋಟ, 14ನೇ ಕ್ರಾಸ್ ಸೋಮೇಶ್ವರಪುರಂ, ತುಮಕೂರು-2.

ಅತ್ಯಂತ ಪುರಾತನ ಕಾಲದಿಂದಲೂ ಪ್ರಪಂಚದ ನಾನಾ ದೇಶಗಳಿಗೆ ಭಾರತ ರಾಷ್ಟ್ರವು ನೀಡಿರುವ ಕೊಡುಗೆಯ ಬಗ್ಗೆ ವಿಶ್ವಮಾನ್ಯರಾದ ಶ್ರೀ ವಿವೇಕಾನಂದರು "Contribution of India to the thought of the world was silent, unperceived yet omnipresent in its effect, it has revolutionised the thought of the world" ಎಂದು ಹೇಳಿದ್ದಾರೆ. ವಿಶ್ವದ ವಿಚಾರ ಶೀಲತೆಗೆ ಭಾರತದ ಕೊಡುಗೆ ಅಪಾರವಾದದ್ದು. ಸದ್ದು ಗದ್ದಲ ವಿಲ್ಲದೆ, ಯಾರ ಗಮನಕ್ಕೂ ಬಾರದೆ, ಸರ್ವವ್ಯಾಪಕವಾದಂತ ಒಂದು ವಿಚಾರ ಕ್ರಾಂತಿಯನ್ನೇ ಪ್ರಪಂಚಕ್ಕೆ ನೀಡಿದೆ ಎಂಬುದು ಅವರ ಅಭಿಪ್ರಾಯ.

ಇಂತಹ ಅತ್ಯಮೂಲ್ಯವಾದ ಶಾಂತಿ, ಸಹನೆಗೆ ಹೆಸರಾಗಿ ಆಧ್ಯಾತ್ಮ, ಗಣಿತ ಮತ್ತು ವಿಜ್ಞಾನ ಕ್ಷೇತ್ರಗಳಲ್ಲಿ ವಿಶ್ವಕ್ಕೆ ಮಾರ್ಗದರ್ಶನ ನೀಡುತ್ತಿದ್ದ ಭಾರತದ ಶ್ರೇಷ್ಠತೆಯನ್ನು ಮನಗಂಡು ಅನೇಕ ಮಂದಿ ಪಾಶ್ಚಾತ್ಯರು ಧಾವಿಸಿ ಬಂದಿರುವುದನ್ನು ಇತಿಹಾಸ ಹೇಳುತ್ತಿದೆ. ಇವರಲ್ಲಿ ಬಹಳ ಮಂದಿ ಅನೇಕ ವರ್ಷಗಳ ಕಾಲ, ಆಗಿನ ಕಾಲದಲ್ಲಿ ವಿಶ್ವಕ್ಕೇ ಪಸಿದ್ಧವಾಗಿದ್ದ ನಳಂದ, ತಕ್ಷಶಿಲಾ ಮುಂತಾದ ವಿಶ್ವವಿದ್ಯಾಲಯ ಗಳಲ್ಲಿ ಸೇರಿಕೊಂಡು ತಮ್ಮ ಜ್ಞಾನಾಭಿವೃದ್ಧಿ ಪಡಿಸಿಕೊಂಡು ಮತ್ತೆ ತಮ್ಮ ದೇಶಗಳಿಗೆ ತೆರಳಿ ತಾವು ಪಡೆದ ಜ್ಞಾನವನ್ನು ಅಲ್ಲಿಯಜನಗಳೊಂದಿಗೆ ಹಂಚಿಕೊಂಡಿರುತ್ತಾರೆ; ಮತ್ತೆ ಕೆಲವರು ಭಾರತದಲ್ಲಿ ಅನೇಕ ವರ್ಷಗಳ ಕಾಲ ಸಂಚರಿಸಿ ಇಲ್ಲಿಯ ಜನಜೀವನ, ಸಂಸ್ಕೃತಿ ಹಾಗೂ ಸಾಮಾಜಿಕ ಪರಿಸರಗಳನ್ನು ಅಧ್ಯಯನ ಮಾಡಿ ದಾಖಲಿಸಿದ್ದಾರೆ. ಇವರ ಲೇಖನಗಳಿಂದ ನಮಗೆ ಈಗಲೂ ನಮ್ಮ ಪ್ರಾಚೀನ ಭಾರತದ ಜನತೆ ಮಾರ್ಗ ದರ್ಶನ ಮಾಡಿದ ದಾರಿಯನ್ನು ತಿಳಿಯಲು ಸಾಧ್ಯವಾಗಿದೆ. ಹಿಂದೆ ಪರ್ಷಿಯಾ ಮತ್ತು ಅರಬ್ ದೇಶಗಳಿಂದ ಬಂದ ವಿದ್ವಾಂಸರು ನಮ್ಮ ರಾಷ್ಟ್ರದಲ್ಲಿ ಕೆಲವು ವರ್ಷಗಳಕಾಲ ಸಂಚರಿಸಿ ಇಲ್ಲಿಯ ಸಂಸ್ಕೃತಿಯನು ಅಭ್ಯಸಿಸಿ ತಮ್ಮ ಅಭಿಪ್ರಾಯ ತಿಳಿಸಿರುವ ಕೆಲವು ದಾಖಲೆಗಳನ್ನು ನೋಡೋಣ

ಕ್ರಿ.ಶ. ಒಂಭತ್ತನೆಯ ಶತಮಾನದಲ್ಲಿ ಅರಬ್ ದೇಶದಿಂದ ಬಂದಿದ್ದ Al-Jahiz ಎಂಬುವರು ಈ ರೀತಿ ಬರೆದಿದ್ದಾರೆ "The Hindus excel in astrology, mathematics medicine and in various other sciences. They have developed to a perfection arts like sculpture,



painting and architecture. They have collections of Poetry, philosophy, literature and science of morals. From India we received that Book called Kalilah wa Dimnath. These people have judgement and are brave. They posses the virtues of cleanliness and Purity. Contemplation has originated with them ಹಿಂದೂಗಳು ಜೋತಿಷ್ಯಶಾಸ್ತ್ರ, ಗಣಿತ, ವೈದ್ಯಕೀಯ ಹಾಗೂ ಇತರೆ ವಿಜ್ಞಾನ ಕ್ಷೇತ್ರದಲ್ಲಿ ಎಲ್ಲರನ್ನೂ ಮೀರಿಸಿದ್ದಾರೆ. ಇವರು ಶಿಲ್ಪಶಾಸ್ತ್ರದಲ್ಲಿ ಚಿತ್ರ ಕಲೆಯಲ್ಲಿ ಮತ್ತು ಕೆತ್ತನೆ ಕೆಲಸದಲ್ಲಿ ಪರಿಪೂರ್ಣತೆಯನ್ನು ಸಾಧಿಸಿದ್ದಾರೆ. ಇವರಲ್ಲಿ ತತ್ವಶಾಸ್ತ್ರ ಉತ್ತಮ ಸಾಹಿತ್ಯ ರಚನೆಯ ಮತ್ತು ನೀತಿ ಶಾಸ್ತ್ರಗಳ ಸಂಗ್ರಹಗಳಿವೆ. ಇವರು ನ್ಯಾಯಪರರು ಮತ್ತು ಧೈರ್ಯಶಾಲಿಗಳು. ಶುಭ್ರತೆ ಮತ್ತು ಮನೋನೈರ್ಮಲ್ಯಕ್ಕೆ ಹೆಸರಾದವರು. ಇವರೇ ಜಪ-ತಪ-ಧ್ಯಾನಗಳ ಮೂಲಪುರುಷರು. ಈ ಯಾತ್ರಿಕರ ಅಭಿಪ್ರಾಯವನ್ನು ನಾವು ಗಮನಿಸಿದಾಗ, ಎಂತಹ ಪರಿಪೂರ್ಣತೆ ಪಡೆದ ಸಂಸ್ಕೃತಿ ನಮ್ಮದು ಎಂಬುದು ಅರಿವಾಗುತ್ತದೆ ಒಂಭತ್ತನೆ ಶತಮಾನದಲ್ಲಿಯೇ ಭಾರತವನ್ನು ಸಂದರ್ಶಿಸಿದ ಮತ್ತೊಬ್ಬ ಯಾತ್ರಿಕರಾದ ಯಾಕೂಬಿ (Yaqubi) ಯುವರು ತಮ್ಮ ಪ್ರಾಮಾಣಿಕ ಅಭಿಪ್ರಾಯ ವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ.

"The Hindus are superior to all other nations in inteligence and thoughtfunless. They are more exaet in astronomy and astrology than any other people. The Siddhanta is a good proof of their intellectual powers, by this book the Greeks and the persians have also benefited. In medicine their opinion ranks first" ಹಿಂದುಗಳು ಬುದ್ಧಿವಂತಿಕೆ ಹಾಗೂ ವಿಚಾರಶೀಲತೆಯಲ್ಲಿ ಅತ್ಯಂತ ಶ್ರೇಷ್ಠ ಜನಾಂಗ. ಬೇರೆಯವರಿಗಿಂತ ವಿಶ್ವದಲ್ಲಿ ಖಗೋಳಶಾಸ್ತ್ರ ಮತು ಜ್ಯೋತಿಷ್ಯ ಶಾಸ್ತ್ರದಲ್ಲಿ ನಿಖರತೆಯನ್ನು ಸಾಧಿಸಿದ್ದಾರೆ. ಇದಕ್ಕೆ "ಸಿದ್ಧಾಂತ" ಎಂಬ ಗ್ರಂಥವೇ ಸಾಕ್ಷಿಯಾಗಿದೆ. ಈ ಗ್ರಂಥದಿಂದಲೇ ಗ್ರೀಕರು ಮತ್ತು ಪರ್ಷಿಯನ್ನರು ಪ್ರಯೋಜನ ಪಡೆದಿದ್ದಾರೆ. ವೈದ್ಯಕೀಯ ಕ್ಷೇತ್ರದಲ್ಲಂತೂ ಇವರ ಅಭಿಪ್ರಾಯಕ್ಕೇ ಪ್ರಥಮ ಪಾಶಸ್ತ್ಯ. ಇಡೀ ವಿಶ್ವದ ಜನಾಂಗಕ್ಕೇ ಅಂದಿನ ಕಾಲದಲ್ಲಿ ಭಾರತೀಯರೇ ಎಲ್ಲಾ ಕ್ಷೇತ್ರಗಳಲ್ಲಿಯೂ ಪೂರ್ಣತೆ ಸಾಧಿಸಿದ್ದರೆಂದು ಇವರ ಖಚಿತ ಹಾಗೂ ಪ್ರಾಮಾಣಿಕ ಅಭಿಪ್ರಾಯವಾಗಿದೆ.

ಕ್ರಿ. ಶ. ಹತ್ತನೆಯ ಶತಮಾನದಲ್ಲಿ ಭಾರತ ದೇಶವನ್ನು ಸಂದರ್ಶಿದ ಅರಬ್ ಯಾತ್ರಿಕ Al-Idrisi ಈ ರೀತಿ ಬರೆದಿದ್ದಾರೆ. "The Hindus are by nature inclined to justice and never depart from it in their actions. Their good faith, honesty and faithfulness to their promiscs are well known and they are so famous for these qualities that people flock to their country from every side" ಹಿಂದೂಗಳು ಸ್ವಾಭಾವಿಕವಾಗಿಯೇ ನ್ಯಾಯಪರರು ಹಾಗೂ ತಮ್ಮ ಕಾರ್ಯಕ್ಷೇತ್ರದಲ್ಲಿ ಯಾವಾಗಲೂ ನ್ಯಾಯದ ದಾರಿಯನ್ನು ಬಿಟ್ಟವರಲ್ಲ. ಇವರು ಯಾವಾಗಲೂ ನ್ಯಾಯ, ನಂಬಿಕೆ, ಪ್ರಾಮಾಣಿಕತೆಗೆ ಮತ್ತು ವಿಶ್ವಾಸಕ್ಕೆ ಹೆಸರಾದವರು. ಇಂತಹ ಉತ್ತಮ ಮೌಲ್ಯಗಳಿಂದ ಕೂಡಿದ ಭಾರತ ದೇಶದ ಜನ ಜೀವನದ ಸಲುವಾಗಿ ವಿಶ್ವದ ನಾನಾ ಕಡೆಗಳಿಂದ ಜನರು ಧಾವಿಸಿ ಬರುತ್ತಿದ್ದಾರೆ" ಭಾರತೀಯರು ಎಷ್ಟು ವಿಶ್ವಾಸ ಪಾತ್ರರು, ನ್ಯಾಯ ನೀತಿಗಳ ಖಣಿಗಳು ಎಂಬುದನ್ನು ಇವರ ಅಭಿಪ್ರಾಯದಿಂದ ಅರಿಯಬಹುದಾಗಿದೆ.

ಚೀನಾದೇಶದಿಂದ, ಬೌದ್ಧಮತಾವಲಂಬಿಗಳಾಗಿ, ಬುದ್ಧ ಜನಿಸಿದ ನಾಡನ್ನು ಪವಿತ್ರ ಯಾತ್ರಾ ಸ್ಥಳವೆಂದು ನಂಬಿ ಬಂದಿದ್ದ ಫಾಹಿಯಾನ್ ಮತ್ತು ಹೂರ್ಯ-ತ್ಸಾಂಗ್‌ರವರೂ ಸಹ ಇದೇ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ. ಆ ಕಾಲದಲ್ಲಿ ಕಾಲು ನಡಿಗೆಯಲ್ಲಿಯೇ ಹತ್ತಾರು ವರ್ಷ ಈ ಪವಿತ್ರ ನಾಡಿನಲ್ಲಿ ಸಂಚರಿಸಿ "ಭಾರತ ದೇಶದಲ್ಲಿ ಸುಳ್ಳು ಹೇಳುವವರನ್ನು ಕಾಣಲಿಲ್ಲ. ಒಂದು ಕಳ್ಳತನವಾಗಿದ್ದನ್ನೂ ಕೇಳಲಿಲ್ಲ. ಅತ್ಯಂತ ನ್ಯಾಯ ನಿಷ್ಠೆಗಳ ನಾಡು ಭಾರತ. ಸ್ತ್ರೀಯರಿಗೆ ಅತ್ಯಂತ ಗೌರವ, ಪೂಜ್ಯತೆ ಕೊಡುತ್ತಿರುವ ನಾಡು ಈ ದೇಶ. ಎಂಬುದಾಗಿ ಬರೆದು ಹೋಗಿದ್ದಾರೆ. ಪ್ರಾಮಾಣಿಕತೆಗೆ ಹೆಸರಾದವರೆಂದರೆ ಭಾರತೀಯರೇ ಎಂದಿದ್ದಾರೆ."

ಇಂತಹ ಶ್ರೇಷ್ಠ ಪರಂಪರೆಯನ್ನು ಹೊಂದಿರುವ ನಾವು ಈಗ ಹೇಗಾಗಿದ್ದೇವೆ? ಏಕೆ? ಭಾರತೀಯರೆಲ್ಲಾ ಯೋಚಿಸಬೇಕಾದ ವಿಚಾರ ಇದು. ಬುದ್ಧಿಜೀವಿಗಳೆಲ್ಲಾ ಚಿಂತಿಸಿ ಸೂಕ್ತಮಾರ್ಗದರ್ಶನ ನೀಡಿ ಮತ್ತೆ ಅಂತಹ ನಾಡೊಂದನ್ನು ನನಸಾಗಿ ಮಾಡುವರೆಂದು ಆಶಿಸೋಣವೇ.





## ವ್ಯಕ್ತಿ ನಿರ್ಮಾಣಕ್ಕೆ ಪ್ರತಿಬಂಧಕವಾಗಿರುವ ಶಿಕ್ಷಣ

❁ ಎ. ಕೃಷ್ಣಮೂರ್ತಿ, ಪ್ರಶಿಕ್ಷಕರು, ಸಿದ್ಧಗಂಗಾ ಶಿಕ್ಷಕ ತರಬೇತಿ ಸಂಸ್ಥೆ, ತುಮಕೂರು-2.

ವ್ಯಕ್ತಿಯಲ್ಲಿ ಆದಾಗಲೇ ಪರಿಪೂರ್ಣತೆಯನ್ನು ವ್ಯಕ್ತಗೊಳಿಸುವ ಪಕ್ರಿಯೆಯೇ ವಿದ್ಯಾಭ್ಯಾಸ ಎಂಬುದರ ಆಧಾರದ ಮೇಲೆ ಶಿಕ್ಷಣ ಎಂಬುದು ಅತಿವಿಶಾಲವಾದ ಚೌಕಟ್ಟನ್ನು ಹೊಂದಿದೆ. ನಮ್ಮಲ್ಲಿ ಅಡಕವಾಗಿರುವ ವಿವಿಧ ರೀತಿಯ ಶಕ್ತಿಯು ಪ್ರಚೋದಿಸಲ್ಪಟ್ಟಾಗ ಬುದ್ಧಿಶಕ್ತಿಯು ವಿಕಾಸಗೊಂಡು ವಿವೇಚನೆ, ಆಲೋಚನೆ, ಚಿಂತನೆ ಪುಟಿದೇಳುತ್ತದೆ. ಕಬ್ಬಿಣವನ್ನು ಕಾದಾಗ ಮಾತ್ರ ಬೇಕಾದ ಆಕಾರಕ್ಕೆ ತರಬಹುದಲ್ಲವೇ ? ಯೌವನಕ್ಕೆ ಕಾಲಿಡುವಾಗಲೇ ವಿದ್ಯಾರ್ಥಿಗಳಲ್ಲಿ ನಾನಾಬಗೆಯ ಯೋಚನೆಗಳು ಮೈತಾಳುತ್ತವೆ. ಕ್ರಮಬದ್ಧವಾದ ಚಿಂತನಾಶಕ್ತಿಯನ್ನು ವಿದ್ಯಾರ್ಥಿಗಳು ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು. ಚಿಂತೆಗಳು ಬೇಕಾದಷ್ಟು ಅಲೆಗಳ ರೂಪದಲ್ಲಿ ಏಳುತ್ತವೆ. ಈ ಚಿಂತನಾಶಕ್ತಿಯು ಎಷ್ಟರ ಮಟ್ಟಿಗೆ ಕಾರ್ಯನಿರ್ವಹಿಸುತ್ತವೆ ಎಂಬುದರ ಬಗ್ಗೆ ಅರಿವುಮೂಡಿಸುವಲ್ಲಿ ಸಮಾಜ, ಪೋಷಕರು ಶಿಕ್ಷಕರು ವಿದ್ಯಾರ್ಥಿಯ ಸುತ್ತಲೂ ಇರುವ ಬೇಲಿಗಳು. ಯಾವ ಬೇಲಿಯು ಸಡಿಲವಾದರೂ ಗಿಡಕ್ಕೆ ಹಾನಿ ಖಚಿತ. ಇದನ್ನು ಭದ್ರಪಡಿಸಲು ಸರ್ವರೂ ಪ್ರಯತ್ನ ಶೀಲರಾಗಬೇಕು. ಚಿಂತನೆ ಮಾಡುವ ಅಭ್ಯಾಸ ಮಾಡಬೇಕು.

**ಚಿಂತನಾ ಶಕ್ತಿ:-** ವ್ಯಕ್ತಿಯ ಜ್ಞಾನಮ್ಯಾಗವು ಒಂದು ಸೂಕ್ಷ್ಮ ಶರೀರ. ನಮ್ಮ ಶರೀರವು ಒಂದು ಜೈವಿಕ ಶರೀರ. ಜೀವಕೋಶಗಳಿಂದ ಶರೀರ ಬೆಳೆಯುತ್ತದೆ. ಒಂದು ಮಾಂಸದ ಉಂಡೆಯೋಪಾದಿಯಲ್ಲಿ ಪ್ರಾರಂಭವಾಗುವ ನಮ್ಮ ಶರೀರ ಮಗುವಿನ ಆಕಾರ ತಾಳಿ ಜನಿಸುತ್ತದೆ. ತಕ್ಷಣವೇ ತನ್ನ ಸುತ್ತಲೂ ಇನ್ನೊಂದು ವ್ಯೂಹವನ್ನು ರಚಿಸಿಕೊಳ್ಳುತ್ತದೆ. ಜ್ಞಾನೇಂದ್ರಿಯಗಳ ಮೂಲಕ ಗ್ರಹಿಸುವ ಸಂವೇದನೆಗಳನ್ನು ಸ್ವೀಕರಿಸುತ್ತಾ ಶರೀರದೊಡನೆ ವಿಕಾಸಹೊಂದುತ್ತಿರುವುದರಿಂದ ನಮ್ಮ ಶರೀರವು ಮನಸ್ಸನ್ನೊಳಗೊಂಡ ಇನ್ನೊಂದು ಅಮೂರ್ತಶರೀರವನ್ನು ಹೊತ್ತಿರುತ್ತದೆ. ಅದು ಆಡಿಸಿದಂತೆ ನಮ್ಮ ಶರೀರ ಆಡುತ್ತದೆ. ಬುದ್ಧಿಶಕ್ತಿಯ ಬೆಳವಣಿಗೆಗೆ ಕೇಂದ್ರವಾಗಿರುವ ಮೆದುಳು ಈ ಕಾರ್ಯ ನಿರ್ವಹಿಸುತ್ತದೆ ಮನಸ್ಸು, ಬುದ್ಧಿ, ಅಹಂಕಾರ, ಮುಂತಾದ ವ್ಯಕ್ತಿತ್ವದ ರಚನೆಗೆ ಬೇಕಾಗುವ ಸಲಕರಣೆಗಳೇ ಈ ಸೂಕ್ಷ್ಮ ಶರೀರದ ಅವಯವಗಳು. ಈ ವಿವಿಧ ಬಗೆಯ ಶಕ್ತಿಗಳಲ್ಲಿ ಒಂದಾಗಿರುವ ಈ ಚಿಂತನಾಶಕ್ತಿಯು ಬುದ್ಧಿ ಶಕ್ತಿಯೊಡನೆ ವ್ಯವಹರಿಸುತ್ತಾ ವಿವೇಚನಾ ಶಕ್ತಿಯನ್ನು ಬೆಳೆಸುತ್ತಿರುತ್ತದೆ. ಚಿಂತನೆಯು ಜೀವಂತ ವಸ್ತು ಮತ್ತು ಸೂಕ್ಷ್ಮ ತರವಾದ ಶಕ್ತಿ. ಈ ಶಕ್ತಿಯು ನಮಗೆ ಆಹಾರ ಮೂಲಕವೂ ಬರುತ್ತದೆ. ಆಹಾರ ಶುದ್ಧವಾಗಿದ್ದರೆ ಚಿಂತನೆ ಶುದ್ಧವಾಗಿರುತ್ತದೆ. ಪರಿಶುದ್ಧವಾದ ಚಿಂತನೆ ಉಳ್ಳವನು ಬಹಳ ಪ್ರಭಾವ ಶಾಲಿಯಾಗಿರುತ್ತಾನೆ. ಈತನು ತನ್ನ ಮಾತಿನ

ಮೂಲಕ ಕೇಳುವವರ ಮನಸ್ಸನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನಲ್ಲದೆ, ಒಂದುರೀತಿಯ ಮಾರ್ಪಾಟು ಹೊಂದುವಂತಹ ಸನ್ನಿವೇಶವನ್ನು ಬೆಳೆಸುತ್ತಾನೆ. ಚಿಂತನೆಯು ಏನು ಬೇಕಾದರೂ ಮಾಡಬಲ್ಲದು. ಚಿಂತೆ ಎಂಬ ಇನ್ನೊಂದು ಪದವಿದೆ. ಇದು ವ್ಯಕ್ತಿಯಲ್ಲಿ ಅಡಕವಾಗಿರುವ ಋಣಾತ್ಮಕ ಪ್ರಕ್ರಿಯೆ. ಚಿಂತನೆಯು ಪ್ರಯೋಜನಕಾರಿಯಾದ ವಸ್ತುವಾದರೆ ಚಿಂತೆಯು ಮನಸ್ಸನ್ನು ಸುಡುವ ವಸ್ತುವಾಗಿ ಅಡಗಿರುತ್ತದೆ. ಚಿಂತೆಯನ್ನು ಬದಲಿಸಿ ಚಿಂತನೆಯನ್ನು ಮಾಡುತ್ತಾ ಜೀವನವನ್ನು ಹಸನುಗೊಳಿಸಬೇಕಾದುದು ಇಂದಿನ ವ್ಯಕ್ತಿತ್ವ ನಿರ್ಮಾಣಕ್ಕೆ ಅತ್ಯಾವಶ್ಯಕವಾದ ಮಾರ್ಗ. ಇದನ್ನು ಸರಿಪಡಿಸುವಲ್ಲಿ ಶಿಕ್ಷಣವು ಅತಿ ಹೆಚ್ಚಿನ ಪಾತ್ರವನ್ನು ವಹಿಸುತ್ತದೆ. ಕಾರಣ ಹೇಳುವ ಕೇಳುವ ಪ್ರಕ್ರಿಯೆಗೆ ಇಲ್ಲಿ ಸ್ಥಾನವಿದೆ.

**ಚಿಂತೆಯು ಬಗ್ಗೆ ಕಾಣುವುದೇನು ?**

ಪುರಂದರದಾಸರು ಹೇಳುತ್ತಾರೆ. ಚಿಂತೆ ಯಾರಿಗೂ ಬಿಟ್ಟಿದ್ದಲ್ಲ. ಅಂದಮೇಲೆ ಚಿಂತಿಸುತ್ತಲೇ ಇದ್ದರೆ ಪ್ರಯೋಜನವೇನು ?

ಎಂತಾದರೂ ಚಿಂತೆ ಬಿಡದು । ನಿಶ್ಚಿಂತರಾದವರ ನಾನೊಬ್ಬರನೂ ಕಾಣೆ
ಬ್ರಹ್ಮನಿಗೆ ಶಿರವೊಂದು ಭಿನ್ನವಾದ ಚಿಂತೆ
ರಕ್ಕಸರ ಗುರುವಿಗೆ ಕಣ್ಣಿಲ್ಲದ ಚಿಂತೆ
ಮನ್ಮಥಗೆ ತನುಸುಟ್ಟು ಭಸ್ಮವಾದ ಚಿಂತೆ
ಮುಕ್ಕಣ್ಣ ಶಿವನಿಗೆ ತಿರಿದುಂಬೋ ಚಿಂತೆ ॥೧॥

ಧರ್ಮನಿಷ್ಠರಿಗೆ ಸುಖದೊಳಿರುವ ಚಿಂತೆ ।
ದುಷ್ಕರ್ಮಿಗಳಿಗೆ ಪರರ ಕೆಡಿಸುವ ಚಿಂತೆ
ತಮ್ಮ ಅರ್ಜುನನಿಗೆ ವೈರಿಯ ಕೊಲ್ಲುವ ಚಿಂತೆ
ಅಣ್ಣ ಭೀಮನಿಗೆ ಅನ್ನ ಸಾಲದ ಚಿಂತೆ ॥೨॥

ಭಕ್ತರಿಗೆ ಗುರುವಿನಲಿ ಮುಕ್ತಿ ಪಡೆಯುವ ಚಿಂತೆ
ಮುಕ್ತರಿಗೆ ಅನುಕ್ಷಣವು ಹರಿದರ್ಶನದ ಚಿಂತೆ
ಮುಕ್ತಿ ಬಲ್ಲವರಿಗೆ ತತ್ವ ಹೇಳುವ ಚಿಂತೆ
ಶಕ್ತಿ ಪುರಂದರ ವಿಠಲಗೆ ನಮ್ಮ ಸಲಹುವ ಚಿಂತೆ ॥ ೩ ॥

**ಚಿಂತನೆಗಳ ಪ್ರಸಾರ ಮಾಧ್ಯಮ :–** ಮನಸ್ಸು ಅಥವಾ ಮನೋವಸ್ತುವು ಆಕಾಶದಂತೆ ಅಂತರಿಕ್ಷವನ್ನೆಲ್ಲಾ ತುಂಬಿದೆ. ನಮ್ಮಲ್ಲುಂಟಾಗುವ ಭಾವನೆಗಳಿಗೆ ಪ್ರಾಣಮಾಧ್ಯಮವಾಗಿರುವಂತೆ ಶಾಖ, ಬೆಳಕು, ವಿದ್ಯುತ್ ಮುಂತಾದುವುಗಳಿಗೆ



ಆಕಾಶವು ಮಾಧ್ಯಮವಾಗಿರುವಂತೆಯೂ ಶಬ್ದಕ್ಕೆ ವಾಯುವು ಮಾಧ್ಯಮವಾಗಿರುವಂತೆಯೂ ಚಿಂತನೆಗಳಿಗೆ ಮನಸ್ಸು ಮಾಧ್ಯಮವಾಗಿದೆ. ನಿಂತಿರುವ ನೀರಿಗೆ ಕಲ್ಲು ಎಸೆದಾಗ ಅಲೆಗಳು ಉಂಟಾಗುವಂತೆ, ಒಂದು ಆಕಾರದಿಂದ ಬೆಳಕು ಎಲ್ಲಾ ಕಡೆ ಬರುವಂತೆಯೂ ಚಿಂತನೆಗಳು ಒಳ್ಳೆಯದಾಗಲೀ, ಕೆಟ್ಟದ್ದಾಗಲೀ ಒಬ್ಬ ವ್ಯಕ್ತಿಯ ಮನಸ್ಸಿಂದ ಹೊರಬಿದ್ದಾಗ ಅವು ಎಲ್ಲಾ ದೂರಗಳಿಗೂ ವ್ಯಾಪಿಸುತ್ತದೆ. ಆಕಾಶವಾಣಿಯ ಕೇಂದ್ರದಲ್ಲಿ ಪ್ರಸಾರ ಮಾಡುತ್ತಿರುವ ವಿಷಯವು ಯಾವ ರೀತಿ ವಿದ್ಯುದಯಸ್ಕಾಂತಿಯ ತರಂಗಗಳ ಮೂಲಕ ಪ್ರಸರಿಸುತ್ತದೆಯೋ ಹಾಗೆ ಪ್ರತಿಯೊಂದು ವಸ್ತುವಿನಿಂದ ಹೊರಡುವ ಅಂಶಗಳು ಪ್ರಸಾರವಾಗುತ್ತದೆ. ನಮ್ಮ ರೇಡಿಯೋಗಳು ಆತರಂಗಗಳನ್ನು ಹಿಡಿದು ಪುನಃ ಬಿತ್ತರಿಸುತ್ತವೆ. ಒಂದು ಅಗೋಚರ ಕ್ರಿಯೆಯು ಸಹ ನಮ್ಮ ಸಮೀಪಕ್ಕೆ ದೂರದಿಂದ ತಲುಪುತ್ತವೆ ಇದೇರೀತಿ ಚಿಂತನೆಯು ಅಥವ ವಿಷಯವು ಬಿತ್ತರಿಸಲ್ಪಟ್ಟಾಗ ಅವರವರ ಶಕ್ತ್ಯಾನುಸಾರ ಗ್ರಹಿಸಿ ಅಂತಹವೇ ಚಿಂತನೆಗಳನ್ನು ಹೊರಗೆಡಹುತ್ತಾರೆ.

**ಶಿಕ್ಷಣ ಕ್ಷೇತ್ರದಲ್ಲಿ :–** ನಮಗೆ ತಿಳಿದಿರುವಂತೆ ವ್ಯಕ್ತಿತ್ವ ರೂಪಿಸಲ್ಪಡುವುದರಲ್ಲಿ ಶಿಕ್ಷಕನು ಮಹತ್ತರ ಪಾತ್ರವಹಿಸುತ್ತಾನೆ. ಸ್ವಾಮಿವಿವೇಕಾನಂದರ ಪ್ರಕಾರ, The end of all education is man making and character developing" ಎಂತಹ ಸುಸಂಸ್ಕೃತ ಕುಟುಂಬದಿಂದ ಹುಟ್ಟಿಬಂದಿದ್ದರೂ ಶಾಲಾಕಾಲೇಜುಗಳಲ್ಲಿನ ಪರಿಸರ ಮಾಧ್ಯಮವು ಕೆಟ್ಟಿದ್ದರೆ, ವಿದ್ಯಾರ್ಥಿಯು ವಂಚಿತನಾಗುತ್ತಾನೆ ತಂದೆ ತಾಯಿಯು ಮಕ್ಕಳಿಗೆ ಶಾಲೆಯ ಪಾಠ ಹೇಳಿಕೊಡುವ ಸಂದರ್ಭದಲ್ಲಿ ತಮ್ಮದೇ ವೈಖರಿ ವಿಧಾನವನ್ನು ಬಳಸಿದಾಗ ಮಕ್ಕಳು ತಮ್ಮ ಶಿಕ್ಷಕರ ಮಾರ್ಗದರ್ಶನಕ್ಕೆ ಹೆಚ್ಚು ಪ್ರಧಾನ ಕೊಡುವುದುಂಟು. ಅಂದ ಮೇಲೆ ಎಷ್ಟು ಸೂಕ್ಷ್ಮವಾಗಿ ವಿದ್ಯಾರ್ಥಿಗಳೊಡನೆ ವ್ಯವಹರಿಸಬೇಕೆಂಬುದನ್ನು ತಿಳಿಯಬೇಕಾಗಿದೆ. ಪ್ರತಿಯೊಬ್ಬರ ಮುಖ ಮತ್ತು ಧ್ವನಿಯು ಇತರರಿಗಿಂತ ಬೇರೆಯಾಗಿರುತ್ತದೆಯೋ ಹಾಗೆ ಚಿಂತಿಸುವ ಮತ್ತು ತಿಳಿದುಕೊಳ್ಳುವ ರೀತಿಗಳೂ ಬೇರೆಯಾಗಿರುತ್ತವೆ. ನಮ್ಮ ಶಾಲಾ ಕಾಲೇಜುಗಳಲ್ಲಿ ತರಗತಿಗಳು ನಡೆಯುವ ಸಂದರ್ಭಗಳಿರಲಿ ಇಲ್ಲದಿರಲಿ, ಕಲುಷಿತವಾತಾವರಣ ಸೃಷ್ಟಿಯಾಗುತ್ತಲೇ ಇರುತ್ತದೆ. ಶಾಲೆಗೆ ದಾಖಲಾದ ಸಂದರ್ಭದಲ್ಲಿ ಶಿಕ್ಷಕರ ವ್ಯಕ್ತಿತ್ವವು ಮಗುವಿನ ಮೇಲೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಉದಾಹರಣೆಗೆ ಕೆಲವು ಮೂಲಭೂತ ಅಂಶಗಳುತಮ್ಮ ಜೀವನದುದ್ದಕ್ಕೂ ಅತ್ಯಾವಶ್ಯಕವಾಗಿರುವುದನ್ನು ಕಲಿಸುವ ಕಲಿಯುವ ಸಂದರ್ಭದಲ್ಲಿ ವ್ಯತ್ಯಾಸವಾಗಿದ್ದಲ್ಲಿ ಅದು ಎಷ್ಟರ ಮಟ್ಟಿಗೆ ಮುದ್ರೆ ಒತ್ತುತ್ತದೆ ಎಂದರೆ ಮುಂದೆ ಸರಿಪಡಿಸಲು ಸಾಧ್ಯವಾಗದಷ್ಟು ಕಠಿಣವಾಗುತ್ತದೆ. ಇದೇ ರೀತಿ ದುಶ್ಚಟಗಳು' ಕೆಟ್ಟಭಾವನೆಗಳು, ಆಲೋಚನೆ ಮತ್ತು ವಿವೇಚನೆ, ಇತ್ಯಾದಿಗಳು. ನೈತಿಕತೆ ಮಾಯವಾಗುತ್ತದೆ. ಶಿಕ್ಷೆ ಕೊಟ್ಟು ಶಿಕ್ಷಕರು ಹೇಳಿ ಕೊಡುವ ಪರಿಪಾಠ ನಡೆಯುತ್ತಿಲ್ಲ. ಒಂದಲ್ಲಾ ಒಂದು ರೀತಿ ವಿರೋಧಕ್ಕೆ

ಬೆಂಬಲ ಸಿಗುತ್ತಿದ್ದು ಅದರದೇ ಮೇಲುಗೈ ಆಗಿರುತ್ತದೆ. ಇದರ ಬಗ್ಗೆ ಚಿಂತನೆ ನಡೆಸ ಬೇಕಾದವರು ಯಾರು? ಇದಕ್ಕೆ ಪರಿಹಾರ ಹುಡುಕುವುದಕ್ಕೆ ಸಾಧ್ಯವಿದೆಯೇ ಎಂಬುದನ್ನು ತಿಳಿಯ ಬೇಕಾಗಿದೆ. ಸ್ವಾಮಿವಿವೇಕಾನಂದರು ಮಕ್ಕಳಲ್ಲಿ ಚಿಂತನಾಶಕ್ತಿಯನ್ನು ಬೆಳೆಸುವ ಬಗ್ಗ ಈ ರೀತಿ ತಿಳಿಸಿದ್ದಾರೆ.

You cannot teach a child anymore than you can grow a plant. The plant develops its own nature. The child also teaches itself. But you can help it to go forward in its own way. What you can do is not of a pasitive nature but negative You can take away the absrocles, and knowledge come out of it's own nature. Loosen the soil a little, so that it may come it easily writhin man is all knowledge, and it requires only an awakening, and that much is the work of teacher. We have to do so much for the boys that they may learn to apply their own intellect to the proper use of their hands, legs, ears and eyes. If you do not allow one to become a lion one will become a for.

## ಪ್ರಕಟಣೆ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರ ಮಹೋತ್ಸವನ್ನು 1997 – ಫೆಬ್ರವರಿ ಮಾಹೆಯಲ್ಲಿ ಆಚರಿಸಲು ಯೋಚಿಸಲಾಗಿದೆ. ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಈ ನಿಧಿ ವಂತಿಕೆಗಳನ್ನು ನೀಡಿರುವುದು ಸರಿಯಷ್ಟೆ. 5000 ರೂಗಳನ್ನು ನೀಡುವವರ ಹೆಸರನ್ನು ಅಮೃತ ಶಿಲೆಯ ಮೇಲೆ ಗುರುತಿಸುವ ಯೋಜನೆ ರೂಪಿಸಿದೆ. ಪ್ರಯುಕ್ತ ಆ ಮೊತ್ತಕ್ಕೆ ಅನುಗುಣವಾಗಿ ಸಂದಾಯ ಮಾಡಿ ಹೆಸರನ್ನು ನೊಂದಾಯಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಈ ಬಗ್ಗೆ ಎಲ್ಲ ಹಳೆಯ ವಿದ್ಯಾರ್ಥಿಗಳು ಗಮನ ನೀಡಲು ಕೋರುತ್ತೇವೆ.

ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದ್ಯಾರ್ಥಿ ಸಂಘ.



# ಶಬರಿಗಿರಿವಾಸ ಅಯ್ಯಪ್ಪಸ್ವಾಮಿ ಅಥವಾ ಶ್ರೀ ಕ್ಷೇತ್ರ ಶಬರಿಮಲೆ

ಆರ್. ಜಿ. ಶ್ಯಾನಭಾಗ, ಹೊನ್ನಾವರ ಶರಾವತಿ ಪ್ರೌಢಶಾಲೆ, ಹೊಸಾಡ ಹೊನ್ನಾವರ.

ಅಯ್ಯಪ್ಪ ಸ್ವಾಮಿಯ ಆರಾಧನೆ ಭಕ್ತಿ ಪ್ರಸಾರ ಆಂದೋಲನದಿಂದ ಇತ್ತೀಚಿನ ದಿನಗಳಲ್ಲಿ ವ್ಯಾಪಕವಾಗಿ ಜನಾದರಣೇಯುಗೊಳ್ಳುತ್ತಿವೆ. ಅಯ್ಯಪ್ಪಸ್ವಾಮಿ ಬೇಡಿದವರ ಕಾಮಧೇನು ಬದುಕಿನ ಹತ್ತಾರೇ ಆಸೆಗಳನ್ನು ಹೊತ್ತುಕೊಂಡು ಶ್ರೀ ಕ್ಷೇತ್ರ ಶಬರಿಮಲೆಗೆ ವ್ರತನಿಷ್ಠರಾಗಿ ಬಂದ ಭಕ್ತ ಭಜಕರ ಅಭೀಷ್ಟೆಗಳನ್ನು ಕ್ಷೇತ್ರದಲ್ಲಿಯೇ ಅಯ್ಯಪ್ಪಸ್ವಾಮಿ ಈಡೇರಿಸುತ್ತಾನೆ ಎಂಬ ನಂಬಿಗೆ ಬೇರೂರಿದೆ.

ಅಯ್ಯಪ್ಪಸ್ವಾಮಿಯ ಮಹಾತ್ಮೆಯು ಕೇರಳದಲ್ಲಿ ಉಪಲಬ್ಧವಿರುವ ಪುರಾತನ ಸಂಸ್ಕೃತ ಗ್ರಂಥವಾದ ಭೂತನಾಹೋಪಾಖ್ಯಾಂದಲ್ಲಿ ಬರುವುದು. ಮಕರ ಸಂಕ್ರಾತಿಯದಂದು ಪರಶುರಾಮ ಮುನಿಯು ಸ್ವಾಮಿ ಅಯ್ಯಪ್ಪನ ಮೂರ್ತಿಯನ್ನು ಸ್ಥಾಪಿಸಿರುವ ಉಲ್ಲೇಖ ಈ ಗ್ರಂಥದಲ್ಲಿ ಅಯ್ಯಪ್ಪ ಸ್ವಾಮಿಯ ಕುರಿತಾಗಿರುವ ಚರಿತ್ರೆ ರೋಮಾಂಚಕವೂ ಆಗಿದೆ.

**ದೈವ ಪುತ್ರ ಪ್ರಾಪ್ತಿ :–** ಪಾಂಡಲಂ ದೇಶದ ಪಾಂಡ್ಯ ವಂಶದ ದೊರೆ ರಾಜ ರಾಜಶೇಖರ ಧೀರ ಹಾಗೂ ಧೀಮಂತನಾಗಿದ್ದನು. ಅವನ ಸಾಮ್ರಾಜ್ಯದಲ್ಲಿ ಸುಖ ಸಮೃದ್ಧಿ ಶಾಂತಿಗಳು ನೆಲೆಸಿದ್ದವು. ಅರಸು ದೀರ್ಘ ಕಾಲದವರೆಗೆ ನಿಪುಣನಾಗಿದ್ದನು. ಮುಂದಿನ ಅರಸುತನಕ್ಕೆ ಉತ್ತರಾಧಿಕಾರಿಗಳಿಲ್ಲವೆಂದು ಪ್ರಜೆಗಳು ಕೊರಗುತ್ತಲೇ ಇದ್ದರು. ಕೊರಗು ಕೊರತೆಗಳಿಂದ ವ್ಯಥಿತರಾದ ರಾಜದಂಪತಿಗಳು ತಮಗೆ ಪುತ್ರ ಸಂತಾನ ಪ್ರಾಪ್ತವಾಗಬೇಕೆಂದು ಪಶುಪತಿಯನ್ನು ಪ್ರಾರ್ಥಿಸ ತೊಡಗಿದರು. ವ್ರತನಿಷ್ಠರಾಗಿ ತನ್ನನ್ನು ಆರಾಧಿಸುತ್ತಿರುವ ರಾಜದಂಪತಿಗಳ ಮೇಲೆ ಶಿವನು ಕಣ್ಣು ತೆರೆದುದರಿಂದ ಘಟನೆಯೊಂದು ಜರುಗಿ ಭರವಸೆಯ ಆಶಾಕಿರಣಗಳು ಮೂಡಿದವು.

ಒಂದು ದಿನ ರಾಜನು ಪಂಪಾನದಿಯ ತೀರದ ಮೇಲಿರುವ ದಟ್ಟ ಕಾಡಿನಲ್ಲಿ ಬೇಟೆಗೆಂದು ಹೋಗಿದ್ದನು. ಬೇಟೆಯಿಂದ ದಣಿದಿದ್ದ ರಾಜನು ವಿಶ್ರಮಿಸಲು ಕುಳಿತಾಗ ತಬ್ಬಲಿಯಾಗಿರುವ ಹಾಲುಗಲ್ಲದ ಮಗುವಿನ ಆರ್ತನಾದ ಅರಸನ ಕಿವಿಯ ಮೇಲೆ ಬಿದ್ದಿತು. ಕಾಲನ್ನು ಅಲುಗಾಡಿಸುತ್ತ ಅಳುತ್ತಿರುವ ಮಗು ದೊರೆಯ ಚಿತ್ತವನ್ನಾಕರ್ಷಿಸಿತು. ಮಗುವನ್ನು ಎತ್ತಿಕೊಳ್ಳಲೋ ಎಂದು ಅನುಮಾನದಿಂದ ಯೋಚಿಸುತ್ತಿದ್ದಂತೆ ಸನ್ಯಾಸಿಯೋರ್ವನು ಅಲ್ಲಿಗೆ ಬಂದನು.

ಅನುಮಾನಿಸಿ ತಬ್ಬಲಿ ಮಗುವನ್ನು ಎತ್ತಿಕೊಳ್ಳಲು ದೃತಿಗೆಟ್ಟ ದೊರೆಗೆ ಮಗುವಿನ ಪೋಷಕನಾಗಲು ಸನ್ಯಾಸಿಯು ಧೈರ್ಯವನ್ನು ನೀಡಿ ಆಶೀರ್ವದಿಸಿದ. ಈ ಮಗು ಕ್ಷತ್ರಿಯ ವಂಶಕ್ಕೆ ಸೇರಿದ್ದಾದ್ದರಿಂದ ನಿನ್ನ ಬದುಕಿನಲ್ಲಿ ಆವರಿಸಿರುವ ಕಷ್ಟ

ಕಾರ್ಪಣ್ಯಗಳನ್ನು ನಿವಾರಿಸುವ ಸಾಮರ್ಥ್ಯ ಹೊಂದಿದೆ. ಮಗುವಿನ ಕೊರಳಿಗೆ ಚಿನ್ನದ ಸರವಿರುವುದರಿಂದ ಇದಕ್ಕೆ ಮಣಿಕಂಠ ಎಂದು ಹೆಸರಿಡು. ತನ್ನ ಹನ್ನೆರಡನೆ ವಯಸ್ಸಿನಲ್ಲಿ ಮಗುವಿನ ದೈವಿ ಚರಿತ್ರೆಯು ಘಟಿಸುವುದೆಂದು ಹೇಳಿ ಸನ್ಯಾಸಿ ಮಾಯವಾದನು.

ಸಕಲ ರಾಜ ಮರ್ಯಾದೆಯೊಂದಿಗೆ ತಬ್ಬಲಿ ಮಗುವನ್ನು ಅರಮನೆಯಲ್ಲಿ ಬರಮಾಡಿಕೊಂಡರು. ಮುಂದೆ ಈ ರಾಜ್ಯಕ್ಕೆ ಮಗು ಉತ್ತರಾಧಿಕಾರಿಯಾಗುವನೆಂದು ಪ್ರಜೆಗಳು ಸಂತೋಷಗೊಂಡರು.

ರಾಜ್ಯದ ದಿವಾನ ಅರಸನು ನಿಪುಣನಾದುದರಿಂದ ತಾನೇ ಸಿಂಹಾಸನದ ಉತ್ತ-ರಾಧಿಕಾರಿಯಾಗುವನೆಂಬ ಲೆಕ್ಕಚಾರಗಳೆಲ್ಲವೂ ತಲೆಕೆಳಗಾದವು. ದಿವಾನನು ಚಿಂತಾಕ್ರಾಂತನಾದನು.

ಮಣಿಕಂಠ ಎಂಬ ಹೆಸರನ್ನು ಪಡೆದ ಮಗು ಗುರುಗಳಿಂದ ಸಕಲ ಶಸ್ತ್ರ ವಿದ್ಯೆ ಹಾಗೂ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಾರಂಗತವಾಯಿತು. ವ್ಯಾಸಂಗ ಮುಗಿಸಿ ಅರಮನೆಗೆ ಹೋಗುವ ಮೊದಲು ಗುರುದಕ್ಷಿಣೆ ಕೊಡುವ ಕಾಲ ಸಮೀಪಿಸಿತು. ಮಣಿಕಂಠನು ದೈವೀ ಅವತಾರಿ ಎನ್ನುವುದನ್ನು ಗುರುಗಳು ಮೊದಲೇ ಅರಿತಿದ್ದರು. ಗುರುದಕ್ಷಿಣೆಯ ಬದಲಾಗಿ ತನ್ನ ಏಕಮೇವ ಅಂಥ ಪುತ್ರನಿಗೆ ನೇತ್ರದಾನವನ್ನು ನೀಡಲು ಗುರುಗಳು ಕೇಳಿದನು. ಮಣಿಕಂಠನು ಗುರುವಿನ ಮಗನ ತಲೆಯ ಮೇಲೆ ಕೈಯಿಟ್ಟೊಡನೆ ಅವನಿಕೆ ದೃಷ್ಟಿ ಬಂದಿತು.

ನಡು ಮಧ್ಯದಲ್ಲಿ ರಾಜ ರಾಜಶೇಖರನಿಗೆ ಪುತ್ರ ಸಂತತಿಯಾಯಿತು. ಮಗುವಿಗೆ ಮಣಿಕಂಠ ರಾಜರಾಜನ ಎಂಬ ನಾಮಕರಣವೂ ಆಯಿತು. ಮಣಿಕಂಠನ ಪ್ರತಿಭೆಯನ್ನು ಮೆಚ್ಚಿದ ದೊರೆ ಅವನು ತನ್ನ ಮೊದಲನೇ ಮಗುವು, ಅವನೇ ತನ್ನ ಉತ್ತರಾಧಿಕಾರಿಯೆಂದು ಮೊದಲೆ ತಿರ್ಮಾನಿಸಿದ್ದನು. ಅವನ ರಾಜ್ಯಾಭಿಷೇಕಕ್ಕಾಗಿ ಸಕಲ ಸಿದ್ಧತೆಯನ್ನು ನಡೆಸಲು ದೊರೆ ದಿವಾನನಿಗೆ ಆಜ್ಞಾಪಿಸಿದನು.

**ವಿಷಪ್ರಾಶನ :–** ಕಪಟಿಯಾದ ದಿವಾನನು ಮಣಿಕಂಠನಿಗೆ ವಿಷಪ್ರಾಷನ ಮಾಡಿಸಿದ ಎಲ್ಲ ಪ್ರಯತ್ನಗಳನ್ನು ಪರಶಿವನು ನಿಷ್ಪಲಗೊಳಿಸಿದನು. ಶಿವನು ವೈದ್ಯನ ವೇಷವನ್ನು ಧರಿಸಿ, ಪ್ರಾಣಾಪಾಯಕ್ಕೆ ಉಂಟಾದ ಅಡ್ಡಿಯನ್ನು ನಿವಾರಿಸಿದನು.

**ಕಪಟನಾಟಕ :–** ವಿಫಲಗೊಂಡ ದಿವಾನ ರಾಣಿಯೊಡನೆ ಸೇರಿ ಹೊಸ ಪಿತೂರಿಯನ್ನು ನಡೆಸಿದನು. ತಾನು ಹೂಡಿರುವ ಕಪಟ ನಾಟಕದಲ್ಲಿ ರಾಣಿಗೆ ನಟನೆಯ ಪಾತ್ರವನ್ನು ನಿರ್ವಹಿಸಲು ದುರ್ಬೋಧನೆಯನ್ನು ನೀಡಿದನು. ತಲೆ ನೋವಿನ ನಟನೆ



ಯನ್ನು ಮಾಡಿ ಅದನ್ನು ಗುಣಪಡಿಸಲು ಹೆಣ್ಣು ಹುಲಿಯ ಹಾಲನ್ನು ತರುವಂತೆ ಮಣಿಕಂಠನಿಗೆ ಒತ್ತಾಯಿಸಲು ರಾಣಿಗೆ ದುರುಳ ದಿವಾನ ನಿರ್ದೇಶಿಸಿದನು, ಮೃತ್ಯುದವಡೆಯಲ್ಲಿ ಮಣಿಕಂಠನನ್ನು ದೂಡಲೋಸುಗವೇ ಈ ಕಪಟ ನಾಟಕವನ್ನು ಹೂಡಲಾಗಿತ್ತು.

ರಾಣಿಯು ತಲೆನೋವಿನಿಂದ ನರಳುತ್ತಿದ್ದಂತೆ ನಟಿಸಿದಾಗ ಅವಳು ಕಿರುಚುವುದು ದೊರೆಗೆ ಈ ದೃಶ್ಯ ಅಸಹನೀಯವಾಗಿತ್ತು. ಅವಳ ವೇದನೆ ವಾಸಿಮಾಡಲು ಹೆಣ್ಣು ಹುಲಿಯ ಹಾಲಿನಿಂದ ಮಾತ್ರವೇ ಸಾಧ್ಯವೆಂದು ಅವಳಿಗೆ ಪರೀಕ್ಷಿಸಿದ ವೈದ್ಯನಿಂದ ಉತ್ತರ ಬಂದಿತು. ಹೆಣ್ಣು ಹುಲಿಯ ಹಾಲನ್ನು ತರುವ ಪ್ರಜೆಗಳ ಪ್ರಯತ್ನ ಫಲಿಸದಾದಾಗ ರಾಜನು ಇನ್ನು ಚಿಂತಾಕ್ರಾಂತನಾದನು. ತಂದೆಯ ವ್ಯಥೆಯನ್ನರಿತು ಮಣಿಕಂಠ ತಾನು ಈ ಕಾರ್ಯವನ್ನು ಮಾಡಲು ಕಾಡಿಗೆ ಹೋಗುವುದಾಗಿ ತಂದೆಗೆ ಹೇಳಿದನು ಉತ್ತರಾಧಿಕಾರಿಯಾಗುವ ರಾಜಕುಮಾರ ಮಣಿಕಂಠನನ್ನು ಕಳುಹಿಸುವ ಮನಸ್ಸು ಅವನಿಗಿರಲಿಲ್ಲ. ಅರಸನು ನಿರುಪಾಯವಾಗಿ ಮಣಿಕಂಠನಿಗೆ ಹೆಣ್ಣು ಹುಲಿಯ ಹಾಲನ್ನು ತರಲು ಕಾಡಿಗೆ ಕಳುಹಿಸಿದನು. ಧೈರ್ಯಕ್ಕಾಗಿ ಅವನೊಂದಿಗೆ ಪರಿವಾರವನ್ನು ಕಳುಹಿಸುವ ಅರಸನ ಪ್ರಸ್ತಾಪವನ್ನು ಮಣಿಕಂಠನು ತಿರಸ್ಕರಿಸಿದನು. ಮುಕ್ಕಣ್ಣನ ನೆನೆಪಿಗಾಗಿ ತಂದೆ ಅವನಿಗೆ ತೆಂಗಿನಕಾಯಿಯನ್ನು ನೀಡಿದನು. ಅನು-ಗ್ರಹಿಸಿದ ಶಿವನು ಪಂಚಭೂತಗಳನ್ನು ಮಣಿಕಂಠನ ಜೊತೆಗೆ ಕಳುಹಿಸಿದನು.

ದಾರಿ ಕ್ರಮಿಸುವಾಗ ದೇವಲೋಕದಲ್ಲಿ ಮಹಿಷಿಯ ಅತಿಕ್ರೂರ ವರ್ತನೆಯನ್ನು ತಾಳಲಾರದೆ ಅವಳ ಸಂಹಾರಕ್ಕಿಳಿದನು. ಅವಳ ಎದೆಯ ಮೇಲೆ ಭೈರವ ನರ್ತನ ಮಾಡಿ ಕೊನೆಯುಸಿರೆಳೆಯುವಂತೆ ಮಾಡಿದನು ಇವನು ಬೇರೆ ಯಾರೂ ಇರದೇ ಹರಿಹರನ ಮಗನೆಂದು ತಿಳಿದು ಅವನನ್ನು ನಮಸ್ಕರಿಸಿ ಅಸುನೀಗಿದಳು. ಶಿವನು ಮಣಿಕಂಠನಿಗೆ ನೆರವನ್ನು ನೀಡಲಾರಂಭಿಸಿದನು. ಇಂದ್ರನನ್ನು ಹಾಗೂ ದೇವತೆಗಳಿಗೆ ಈ ಕಾರ್ಯಕ್ಕೆ ಅಣೆಗೊಳಿಸಿದನು. ದೇವತೆಯರು ಹೆಣ್ಣು ಹುಲಿಯ ರೂಪವನ್ನೂ ದೇವತೆಗಳೂ ಗಂಡು ಹುಲಿಗಳ ರೂಪವನ್ನೂ ತಾಳಿದರು. ಹುಲಿಯ ರೂಪವನ್ನು ಧರಿಸಿರುವ ದೇವೇಂದ್ರನ ಮೇಲೆ ಮಣಿಕಂಠ ಸವಾರಿ ಮಾಡುತ್ತ ಅರಮನೆಯತ್ತ ಪ್ರಯಾಣ ಮಾಡಿದನು. ಅರಮನೆಯ ಸುತ್ತಣ ಪ್ರದೇಶ ಹುಲಿಗಳಿಂದ ಗರ್ಜನೆಗೊಂಡು ಕಾನಿನಂತೆ ಗೋಚರವಾಯಿತು. ಜನರು ಸ್ತಂಭೀಭೂತರಾದರು. ಅರಸನು ತನ್ನ ಕಣ್ಣುಗಳನ್ನು ತಾನು ನಂಬದಾದನು. ತಾಯಿಗಾಗಿ ಹಾಲುಗೆರೆಯಲು ಹುಲಿಗಳನ್ನೇ ತಂದಿರುವುದಾಗಿ ಮಗ ತಂದೆಗೆ ಹೇಳಿದಾಗ ರಾಜ ಮಗನಾದ ಮಣಿಕಂಠನ ಕಾಲ ಮೇಲೆ ಬಿದ್ದು ಕ್ಷಮೆಯಾಚಿಸಿದನು. ರಾಣಿಯ ರೋಗ ನೀನು ಕಾಡಿಗೆ ಹೋದಾಗಲೇ ವಾಸಿಯಾಯಿತೆಂದು ಹೇಳಿದನು. ಇದು

ಶಿವನೆಸೆದಿರುವ ಪವಾಡವೇ ಆಗಿರಬೇಕೆಂದು ಮನಸಿನಲ್ಲೆಂತು ಮಣಿಕಂಠನು ಸ್ಮರಿಸಿಕೊಂಡನು. ಈ ದೈವೀ ಘಟನೆ ನಡೆದಾಗ ಮಣಿಕಂಠನಿಗೆ ಹನ್ನೆರಡು ವರ್ಷ ತುಂಬಿತ್ತು. ನಡೆದಿರುವ ಘಟನೆ ದೈವೇಚ್ಛೆಯೇ ಆಗಿರುವುದೆಂದು ಮಣಿಕಂಠ ತಂದೆಯನ್ನು ಸಮಾಧಾನಗೊಳಿಸಿದನು.

ನನ್ನ ಘನಕಾರ್ಯವು ಈಗ ಮುಗಿದಿದೆ. ನಾನು ದೇವಲೋಕದಡೆಗೆ ಹೋಗಬೇಕಾಗಿದೆ. ಎಂದಾಗ ರಾಜನು ಮಣಿಕಂಠನ ಜ್ಞಾಪಕಾರ್ಥವಾಗಿ ದೇವಾಲಯವನ್ನು ಕಟ್ಟಲು ಇಚ್ಛಿಸಿದನು. ಇದಕ್ಕಾಗಿ ಸೂಕ್ತ ತಾಣವನ್ನು ತೋರಿಸು ಎಂದಾಗ ಮಣಿಕಂಠನು ಬಾಣವನ್ನು ಪ್ರಯೋಗಿಸಿ ದೇವಾಲಯ ಮೂಡಿ ಬರಬೇಕಾದ ತಾಣವನ್ನು ಗುರುತಿಸಿದನು. ಶ್ರೀರಾಮನ ಪರಮ ಭಕ್ತೆಯಾದ ಶಬರಿಯು ತಪಗೈದ ಪಾವನಗೈದ ತಾಣ ಇದಾಗಿತ್ತು. ಕಲಿಯುಗದಲ್ಲಿ ಇದೊಂದು ಶಬರಿಮಲೆ ಎಂಬ ಶ್ರೀ ಕ್ಷೇತ್ರವಾಗಿ ಬೆಳಗಲಿ ಎಂದು ಮಣಿಕಂಠನು ಹರಸಿದನು. ಅಗಸ್ತ್ಯ ಮುನಿಯು ಶಬರಿಮಲೆ ದೇವಾಲಯಕ್ಕೆ ನೀಲಿ ನಕ್ಷೆಯನ್ನು ಎಳೆದು ಅದನ್ನು ಕಟ್ಟಿಸಿದರು. ಮಕರ ಸಂಕ್ರಾಂತಿಯದಂದು ಪರಶುರಾಮ ಮುನಿಯು ಸ್ವಾಮಿ ಅಯ್ಯಪ್ಪನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ದೇವಾಲಯಕ್ಕೆ ಹದಿನೆಂಟು ಮೆಟ್ಟಲುಗಳನ್ನು ನಿರ್ಮಿಸಲಾಗಿತ್ತು.

**ಕಂಕಣಬದ್ಧ ವ್ರತಾವಲಂಬನೆ :-** ನಲವತ್ತೊಂದು ದಿನಗಳವರೆಗೆ ಕಠಿಣವಾದ ವ್ರತವನ್ನು ಆಚರಿಸಿ ಸಂಸಾರದ ಆಸೆಯಿಂದ ರುಚಿಯಿಂದ ದೂರವಾಗಿದ್ದು ಬ್ರಹ್ಮಚಾರಿಯಂತಿದ್ದು ಒಳ್ಳೆಯದನ್ನೇ ನೆನಪಿಸುವ ಸ್ವಾಮಿಯ ದರ್ಶನಕ್ಕೆ ಬರುವಾಗ ಮೂಕ್ಕಣ್ಣಿನ ತೆಂಗಿನಕಾಯಿ ಹಾಗೂ ಆಹಾರ ಪದಾರ್ಥಗಳನ್ನು ತಲೆಯ ಮೇಲಿಟ್ಟುಕೊಂಡು ಮಾಲೆಯನ್ನು ಧರಿಸಿ ಪಂಪಾನದಿಯಲ್ಲಿ ಮಿಂದು ಶುಚೀರ್ಭೂತರಾಗಿ ಶರಣು ಎಂದು ಶಬರಿಮಲೆ ದೇವಾಲಯದ ಹದಿನೆಂಟು ಮೆಟ್ಟಲುಗಳನ್ನು ಹತ್ತುವರೋ ಅವರಿಗೆ ತಾನು ಅನುಗ್ರಹಿಸುವೆನೆಂದು ಸ್ವಾಮಿ ಅಯ್ಯಪ್ಪನೇ ಹೇಳಿದ್ದಾನೆ.

ಡಿಸೆಂಬರ್ ಮೊದಲು 41 ದಿವಸಗಳ ಪೂರ್ವದಲ್ಲಿ ವ್ರತವನ್ನು ಹಿಡಿಯಬೇಕಾಗುತ್ತದೆ. ವ್ರತಾವಲಂಬಿ ಲೈಂಗಿಕ ಸಂಪರ್ಕವನ್ನು 41 ದಿನಗಳವರೆಗೆ ಹೊಂದಿರಬಾರದು. ತಲೆಗೂದಲನ್ನು ಬೋಳಿಸಿಕೊಳ್ಳಬಾರದು. ಸ್ತ್ರೀಯರಿಂದ ಸಿದ್ಧವಾದ ಅಡಿಗೆ ಸೇವಿಸಬಾರದು. ಪುರುಷರಿಂದ ಮಾಡಿದ ಅಡಿಗೆ ಇಲ್ಲವೇ ತಾನೇ ಸಿದ್ಧಪಡಿಸಿದ ಅಡಿಗೆಯನ್ನು ಸೇವಿಸಬಹುದು. ಮುಂಜಾನೆ ಸಾಯಂಕಾಲ ತಣ್ಣೀರಿನ ಸ್ನಾನವನ್ನು ಮಾಡಬೇಕು. ಧೂಮಪಾನ ಮಾಡಬಾರದು. ಮಧ್ಯ ಕುಡಿಯಬಾರದು.



41 ದಿನಗಳ ನಂತರ ಶಬರಿಮಲೆಗೆ ಹೊರಡುವ ವ್ರತಾವಲಂಬಿ ಒಂದು ತೆಂಗಿನಕಾಯಿ ಪೂಜಾ ಸಾಮಗ್ರಿ ಹಾಗೂ ಬುತ್ತಿಗಂಟನ್ನು ಹಾಕಿಕೊಂಡಿರುವ ಚೀಲಗಳನ್ನು ಹೆಗಲಮೇಲೆರಿಸಿಕೊಂಡು ಸಾಗಬೇಕು. ಸಾಗುವಾಗ ಸ್ವಾಮಿಯ ನಾಮ ಜಪ ಸಂಕೀರ್ತನೆಯಲ್ಲಿ ಲೀನವಾಗಿರಬೇಕು. ಸ್ವಾಮಿ ಅಯ್ಯಪ್ಪನು ಬೇಟೆಯಾಡಿರುವ ಪೇಟೆತ್ತುಳಲ್ ಎಂಬ ಸ್ಥಾನ ಮಾರ್ಗದಲ್ಲಿ ದೊರಕುವುದು. ಸ್ವಾಮಿ ದರ್ಶನಕ್ಕೆ ಬಂಧವರು ಬೇಟೆಗಾರನ ವೇಷವನ್ನು ಧರಿಸಿ ಇಲ್ಲಿ ಕುಣಿಯುವರು. ಪೇರೂರತೋಡಿ ಎಂಬಲ್ಲಿ ವ್ರತಾವಲಂಬಿಗಳು ಭತ್ತವನ್ನು ಚೆಲ್ಲುವರು. ಪ್ರಯಾಣ ಬೆಳೆಸಿದರೆ ಮುಂದೆ ಬರುವುದು ಕಾಳಗಟ್ಟ. ಇಲ್ಲಿ ತೆಂಗಿನಕಾಯಿ ಒಡೆದು ಮುಂದೆ ಪಯಣಿಸಬೇಕಾಗುತ್ತದೆ. ಅಲ್ಲಿ ಅಳುದಾ ಎಂಬ ನದಿಯಲ್ಲಿ ಮಿಂದು ಶುಚಿರ್ಭೂತರಾಗಿ ನದಿಯಲ್ಲಿಯ ಚಿಕ್ಕ ಕಲ್ಲನೆತ್ತಿಕೊಂಡು ಮುನ್ನಡೆದು ಕಲ್ಲಿಡುಂಕುಂಡ ಎಂಬ ಜಲಾಶಯದಲ್ಲಿ ಕಲ್ಲನ್ನು ಎಸೆಯಬೇಕು. ಅನಂತರ ಸಿಗುವುದು ಇಂಜೆಪ್ಪಾರ್ ಕೋಟೆ ಅಲ್ಲಿ ಮತ್ತೊಂದು ತೆಂಗಿನಕಾಯಿಯನ್ನು ಒಡೆದು ಕರಿಮಲವೆಂಬ ಬೆಟ್ಟವನ್ನು ಹತ್ತಿ ಇಳಿದಾಗ ಪಂಪ ನದಿಯು ದೊರಕುವುದು. ಅಲ್ಲಿರುವ ಗಣಪತಿಗೆ ತೆಂಗಿನಕಾಯಿಯ ನೈವೇದ್ಯವನ್ನು ಮಾಡಿ ಶಬರಿಯಮಲೆ ಬೆಟ್ಟವನ್ನು ಹತ್ತಿದಾಗ ಹದಿನೆಂಟು ಮೆಟ್ಟಲುಗಳಿರುವ ಅಯ್ಯಪ್ಪಸ್ವಾಮಿ ದೇವಾಲಯ ದೂರಕುವುದು.

ಮೊದಲನೇ ವರ್ಷದ ಯಾತ್ರಿಕ ಒಂದನೇ ಮೆಟ್ಟಲಿಗೆ ತೆಂಗಿನಕಾಯಿಯನ್ನು ಒಡೆದು ಮುಂದೆ ಸಾಗಬೇಕು. ಎರಡನೇ ವರ್ಷದ ಯಾತ್ರಿಕ ಎರಡನೇ ಮೆಟ್ಟಲಿಗೆ ಕಾಯಿಯನ್ನು ಒಡೆದು ಐದನೇ ವರ್ಷದ ಯಾತ್ರಿಕ ಐದನೇ ಮೆಟ್ಟಲಿಗೆ ಕಾಯಿಯನ್ನು ಒಡೆದು ಮೆಟ್ಟಲುಗಳನ್ನು ಏರಬೇಕಾಗುತ್ತದೆ. ಹೀಗೆ ಹದಿನೆಂಟನೇ ವರ್ಷ ಸತತ ಪ್ರವಾಸ ಮಾಡಿದವನು ಹದಿನೆಂಟನೇ ಮೆಟ್ಟಲಿಗೆ ತೆಂಗಿನಕಾಯಿಯನ್ನು ಒಡೆದು ಮುಂದೆ ಸಾಗಿ ಶ್ರೀ ಸ್ವಾಮಿ ಅಯ್ಯಪ್ಪನ ದರ್ಶನವನ್ನು ಪಡೆದು ಪುನೀತಗೊಳ್ಳುವನು. ಯಾವನು ಹದಿನೆಂಟನೇ ವರ್ಷ ತಪ್ಪದೆ ಸ್ವಾಮಿಯ ದರ್ಶನವನ್ನು ಪಡೆಯುವನೋ ಅವನು ಸ್ವಾಮಿಯ ಸಂಪೂರ್ಣ ಅನುಗ್ರಹಕ್ಕೆ ಪಾತ್ರನಾಗಿ ಮುಕ್ತಿಯನ್ನು ಹೊಂದುವನೆಂಬ ನಂಬಿಕೆ ಪ್ರಚಲಿತವಿದೆ. ಎಂದೇ ದೇಶದ ವಿವಿಧ ಭಾಗಗಳಿಂದ ಲಕ್ಷೋಪಲಕ್ಷ ಜನರು ತಂಡೋಪತಂಡವಾಗಿ ಶಬರಿಮಲೆಗೆ ಸ್ವಾಮಿಯ ದರ್ಶನವನ್ನು ಪಡೆಯಲು ಬರುತ್ತಿರುತ್ತಾರೆ.

# ಮೋದಾರ ಕೇತಯ್ಯನ ವಚನಗಳಲ್ಲಿ ಬಸವಣ್ಣನವರು

❀ ಪ್ರೊ. ಎಸ್.ಎಸ್. ಭೂಸರಡ್ಡಿ, ಲಕ್ಷ್ಮೀನಗರ ಧಾರವಾಡ 4

---

ಬಸವ ಸಮಕಾಲೀನ ವಚನಕಾರರಲ್ಲಿ ಮೋದಾರ ಕೇತಯ್ಯನು ಒಬ್ಬನಾಗಿದ್ದಾನೆ ಅನುಭವ ಮಂಟಪದ ರೂವಾರಿ ಮಹಾನುಭಾವಿ ಬಸವಣ್ಣನವರನ್ನು ತನ್ನ ವಚನಗಳಲ್ಲಿ ಹೃದಯಂಗಮವಾಗಿ ತತ್ವಗಂಧಿಯಾಗಿ ಅತ್ಯಂತ ಸೊಗಸಾಗಿ ಚಿತ್ರಿಸಿದ್ದಾನೆ. ದಲಿತರಲ್ಲಿ ದಲಿತನಾದ ಅತ್ಯಂತ ಕೆಳಸ್ತರದ ವ್ಯಕ್ತಿ ಕೇತಯ್ಯ. ವೀರಶೈವ ಕಾವ್ಯ-ಪುರಾಣಗಳಲ್ಲಿ ಗಣಸಹಸ್ರನಾಮಾವಳಿಯಲ್ಲಿ ಆತನ ಹೆಸರು ಸುಳಿದೆಗೆದು ಗರಿಗೆದರಿ ನಿಂತಿದೆ. ಕಾಯಕಯೋಗಿಯಾದ ದಿನಾಲು ಬೆಳಗಿನಲ್ಲಿ ಅಡವಿಗೋಗಿ ಬಿದಿರು ಮೆಳೆಗಳನ್ನು ಕಡಿದು ತಂದು ಮನೆಯಲ್ಲಿ ಧರ್ಮಪತ್ನಿ ಸಾಕವ್ವೆಯೊಡನೆ ಅತ್ಯಂತ ಕಲಾತ್ಮಕ ಮರ, ಬುಟ್ಟಿಗಳನ್ನು ಹೆಣೆದು ಕಲ್ಯಾಣದ ಮಾರುಕಟ್ಟೆಯಲ್ಲಿ ಮಾರಾಟಮಾಡಿ ಬಂದ ಹಣದಿಂದ ಗುರುಲಿಂಗ ಜಂಗಮ ದಾಸೋಹಮಾಡುತ್ತಿದ್ದ ಕೇತಯ್ಯ ವಚನಕಾರನೂ ಅಹುದು. ಕೋಲುಪದಗಳಲ್ಲಿ ಕೇತಯ್ಯನ ಹೆಸರನ್ನು ನಮ್ಮ ಜಾನಪದರು ಸ್ಮರಿಸಿಕೊಂಡಿದ್ದಾರೆ. ಬಸವಣ್ಣನು ಆತನಿಗೆ ಜೀವ ಜೀವಾಳ, ಸರ್ವಸ್ವವಾಗಿದ್ದನೆಂಬುದನ್ನು ಅದೆಷ್ಟು ಸುಂದರವಾಗಿ ಈ ವಚನದಲ್ಲಿ ಚಿತ್ರಿಸಿದ್ದಾರೆ. ಆತನ ವಚನಗಳ ಅಂಕಿತ ಗೌರೇಶ್ವರಾ

ಎನ್ನ ಚಿತ್ತಕ್ಕೆ ಆಚಾರಲಿಂಗವಾದಾತ ಬಸವಣ್ಣ
ಎನ್ನ ಬುದ್ಧಿಗೆ ಗುರುಲಿಂಗ ವಾದಾತ ಬಸವಣ್ಣ
ಎನ್ನ ಮನಕ್ಕೆ ಜಂಗಮಲಿಂಗವಾದಾತ ಬಸವಣ್ಣ
ಎನ್ನ ಜ್ಞಾನಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ
ಎನ್ನ ಭಾವಕ್ಕೆ ಮಹಾಲಿಂಗವಾದಾತ ಬಸವಣ್ಣ
ಎನ್ನ ಸ್ಥೂಲ ತನುವಿಂಗೆ ಇಷ್ಟಲಿಂಗವಾದಾತ ಬಸವಣ್ಣ
ಎನ್ನ ಸೂಕ್ಷ್ಮ ತನುವಿಂಗೆ ಶಿವಲಿಂಗವಾದಾತ ಬಸವಣ್ಣ
ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ
ಇಂತೆಂದರಿದೆನಾಗಿ ಗೌರೇಶ್ವರ ಲಿಂಗದಲ್ಲಿ ಸುಖಿಯೊದೆನು.

ಇನ್ನೊಂದು ವಚನದಲ್ಲಿ ಬಸವಣ್ಣನವರ ಸಂಗದಿಂದಲೇ ಪ್ರಭುದೇವರ ಶ್ರೀಪಾದವ ಕಂಡೆನು ಎಂದಿದ್ದಾನೆ. ಈ ವಚನಗಳೇ ಕೇತಯ್ಯ ಅನುಭವ ಮಂಟಪದ ಪರಿಸರದಲ್ಲಿ ಬೆಳೆದಿದ್ದಾನೆ ಎಂಬುದಕ್ಕೆ ಪ್ರಮಾಣವಾಗಿದೆ. ಪ್ರಭು ಬಸವಣ್ಣನವರನ್ನು ನೆನೆದಿದ್ದಾನೆ



ಎನ್ನ ಕಾಯದ ಕಳವಳವ ನಿಲಿಸಿ ಗುರುಲಿಂಗವ ತೋರಿದ
ಎನ್ನ ಮನದ ವ್ಯಾಕುಳವ ನಿಲಿಸಿ ಜಂಗಮವ ತೋರಿದ
ಇಂತು ಅಂತರಂಗ ಬಹಿರಂಗದಲ್ಲಿ ತಾನೆಯಾಗಿ ಎನ್ನ ಪಾವನ ಮಾಡಿದನು.
ಅಮರಗಣಂಗಳು ಮುನಿದು ಎನ್ನ ಕೈಲಾಸಕ್ಕೊಯ್ದರೆ
ಸದ್ಯೋನ್ಮುಕ್ತಿಯ ಕೋರಲೆಂದು

ಮರ್ತ್ಯಕೆ ಮರಳಿತಂದ ಸಂಗನ ಬಸವಣ್ಣನ ಕರುಣದಿಂದ ಘನಕ್ಕೆ ಘನಮಹಿವ ಅಲ್ಲಮ ಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು ಕಾಣಾ ಗೌರೇಶ್ವರಾ.
ಪ್ರಮಥರೆಲ್ಲಾ ಸರ್ವಾಂಗದಲ್ಲಿ ಸಮಗೊಂಡಿದ್ದಾರೆ ಅದರಿಂದಲೇ ನಾನು ಸುಖಿಯೂದೆನೆಂದು ಹೆಮ್ಮೆಯಿಂದ ಹೇಳಿದ ವಚನವಿದು

ಭಕ್ತಿ ಬಸವಣ್ಣನಲಿ ಬಯಲಾಯಿತ್ತು
ಎನ್ನ ವೈರಾಗ್ಯ ಪ್ರಭುದೇವರಲ್ಲಿ ಬಯಲಾಯಿತ್ತು
ಎನ್ನ ಜ್ಞಾನ ಚನ್ನಬಸವಣ್ಣನಲ್ಲಿ ಬದಲಾಯತ್ತು
ಇಂತೀ ಮೂವರು ಒಬ್ಬರೊಂದು ಬಯಲು ಮಾಡಿದರಾಗಿ
ಗೌರೇಶ್ವರಲಿಂಗದಲ್ಲಿ ನಿಶ್ಚಿಂತವಾಗಿತ್ತು.

ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣಿ ಸಂಗಮ, ಬಸವಣ್ಣ ಚನ್ನಬಸವಣ್ಣ ಅಲ್ಲಮಪ್ರಭು.

ಮಡಿವಾಳ ಮಾಚಿದೇವನ ವಚನ ಒಂದು ಬಸವಣ್ಣನವರನ್ನು ಅತ್ಯಂತ ಸುಂದರವಾಗಿ ಹೀಗೆ ವರ್ಣಿಸಿದ್ದಾನೆ.

ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ
ಎತ್ತ ನೋಡಿದರೆ ಲಿಂಗವೆಂಬ ಗೊಂಚಲು
ಎತ್ತ ಹಿಡಿದರೆ ಭಕ್ತಿ ಎಂಬ ರಸವಯ್ಯ

ಬಸವಣ್ಣನವರನ್ನು ಜೋಕೆ ಜತನಮಾಡಿ ಬೆಳಸಿದ ಅಕ್ಕನಾಗಮ್ಮ ಬಸವಣ್ಣನವರನ್ನು ಹಾರ್ದಿಕವಾಗಿಯು ನಂಬುಗುವಂತೆ ವರ್ಣಿಸಿದ್ದಾಳೆ. ಬಸವಣ್ಣ ಬಹುಮುಖ ವ್ಯಕ್ತಿತ್ವದ ನಿಖರವಾದ ಪರಿಚಯು ಅಕ್ಕನಾಗಮ್ಮನ ವಚನಗಳಲ್ಲಿ ಕಾಣಬಹುದು.

ಬಸವಣ್ಣನ ನಾನೆತ್ತಿ ಮುದ್ದಾಡುವೆನು
ಬಸವಾ ಸಂಗನ ಬಸವದೇವಾ ಜಯತು
ಬಸವಗೂ ಎನಗೂ ಭೇದ ಭಾವವಿಲ್ಲ
ಬಸವಗೂ ಎನಗೂ ರಾಸಿಕೂಟವುಂಟು
ಬಸವಣ್ಣ ಪ್ರಿಯ ಚೆನ್ನಸಂಗಯ್ಯನಲ್ಲಿ
ಬಸವನ ಬೆಸಲಾದ ಬಾಣತಿ ನಾನಯ್ಯ
ಬಸವಾ; ಬಸವಾ; ಬಸವಾ !!!

ಇದೇ ರೀತಿಯಲ್ಲಿ ಅನುಭವ ಮಂಟಪದ ರೂವಾರಿ ಮಹಾನುಭಾವಿ ಅಣ್ಣ ಬಸವಣ್ಣನವರನ್ನು ಮಹಾಕವಿ ಹರಿಹರನಂತೂ ತನ್ನ ಬಸವರಾಜದೇವ ರಗಳೆಯಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ. ಅಂದು ಅಷ್ಟೇ ಅಲ್ಲ, ಇಂದೂ ಸಹ ಬಸವಣ್ಣನವರ ಸಂದೇಶ ತತ್ವ ವಚನಗಳನ್ನು ಕುರಿತಾಗಿ ಪ್ರತಿವರುಷವೂ ಒದಿಲ್ಲೊಂದು ಹೊಸ ಗ್ರಂಥಗಳು ಬೆಳಕಿಗೆ ಬುರುತ್ತಲೆ ಇವೆ ಆತತ್ವ ಸಂದೇಶ ಇಂದಿಗೂ ಪ್ರಸ್ತುತವಾಗಿವೆ. ಜಗತ್ತಿನ ಮಹಾಪುರುಷರ ಶ್ರೇಣಿಯಲ್ಲಿ ಅಗ್ರ ಪಂಕ್ತಿಯಲ್ಲಿ ಶೋಭಿಸುತ್ತಿರುವ ಬಸವಣ್ಣನವರ ಅಮರ ಸಂದೇಶವೇ ಇಂದಿನ ಎಲ್ಲ ಸಮಸ್ಯೆಗಳಿಗೆ ತಾರಕ ಮಂತ್ರ ಬಸವಣ್ಣನವರ ಬಗೆಗೆ ರಚಿತವಾದಷ್ಟು ಸಾಹಿತ್ಯ ಇನ್ನಾರ ಬಗೆಗೊ ರಚಿತವಾಗಿಲ್ಲವೆಂದರೆ ತಪ್ಪಾಗಲಾರದು. ಆತನ ವ್ಯಕ್ತಿತ್ವದ, ಪ್ರಭಾವಲಯದಲ್ಲಿ ಬೆಳಗಿನ 395 ವಚನಕಾರರ ಬಗೆಗೆ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ. ಈ ದಿಸೆಯಲ್ಲಿ ನಾವು ಕಾರ್ಯ ಪ್ರವೃತ್ತರಾಗೋಣ.

---

### ಸರ್ವಜ್ಞ ಮೂರ್ತಿಗೆ ಕಾಣಿಕೆ

ಕನ್ನಡಿಗರೆಲ್ಲರೂ ಚೆನ್ನಾಗಿ ಕೇಳಿರೈ ।
ಕನ್ನಡರ ಜಾಣ ಸರ್ವಜ್ಞ ನೊರೆದ ಈ
ಚನ್ನೆನಿಪ ನುಡಿಯ ಸರ್ವಜ್ಞ ॥

ಕನ್ನಡತಿಯೆಂಬುವಳು ಮನ್ನಣೆಯ ಇಲ್ಲದಲೆ
ತನ್ನ ಗೆಳತಿಯರ ಸರಿದೊರೆಗೆ ಬಾರದೆ ।
ಕಣ್ಣೀರೊಳಿಹಳು ಸರ್ವಜ್ಞ ॥

ಕನ್ನಡದ ಸೌಭಾಗ್ಯವಿನ್ನೊಮ್ಮೆ ಮೆರೆಯಲ್ಕೆ ।
ಕನ್ನೈದಿಲೆಗೆ ಚಂದ್ರನುದಯಮಂ ಕಂಡತೆ ।
ಇನ್ನೊಮ್ಮೆ ಬಾರ ಸರ್ವಜ್ಞ

ದಿ॥ ಅ॥ ವಿ॥ ಬಿ. ಶಿವಮೂರ್ತಿಶಾಸ್ತ್ರಿಗಳು



## ಮಾದಾರ ಚೆನ್ನಯ್ಯಾ

ಶ್ರೀಮತಿ ಪಾರ್ವತಮ್ಮ ಚಂದ್ರಣ್ಣ, ಮೈಸೂರು

**ಶರಣ ಸಂದೇಶ**

ನಡೆನುಡಿ ಸಿದ್ಧಾಂತವಾದಲ್ಲಿ ಕುಲಹೊಲೆ ಸೂತಕವಿಲ್ಲ
ನುಡಿಲೇಸು, ನಡೆಅಧಮವಾದಲ್ಲಿ ಅದೇಹೊಲೆ
ಇಲ್ಲವೆ ಹೊಲೆ ಪರದಾರಂಗಳಲ್ಲಿ ?
ಹೊಲಬನರಿಯದೆ ಕೆಟ್ಟು ನಡೆಯುತ್ತ ಮತ್ತೆ ಕುಲಜರೆಂಬ ಒಡಲುವರುಂಟೆ ?
ಆಚಾರವೇ ಕುಲ, ಅನಾಚಾರವೇ ಹೊಲೆ
ಇಂತಿ ಉಭಯುವ ತಿಳಿದು ಅರಿಯಬೇಕು
ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಆರಿ ನಿಜಾತ್ಮ ರಾಮರಾಮನ.

ಶರಣ ಮಾದರಚೆನ್ನಯನು ತನ್ನ ಈ ಮೇಲಿನ ವಚನದಲ್ಲಿ ಪರಿಶುದ್ಧವಾದ ನಡೆನುಡಿ ಎರಡನ್ನೂ ಹೊಂದಿದ ಮಾನವನೇ ಅತ್ಯಂತ ಶ್ರೇಷ್ಠನು ಎಂದು ಸ್ಪಷ್ಟಪಡಿಸಿದ್ದಾನೆ. ಮನುಷ್ಯನ ಕುಲ, ಹೊಲೆ, ಸೂತಕ ಮತ್ತು ಜಾತಿಗಳನ್ನು ಅವನ ಹುಟ್ಟನಿಂದ ಪರಿಗಣಿಸತಕ್ಕದ್ದಲ್ಲ. ಅವನ ನಿತ್ಯ ಜೀವನದ ನಡೆನುಡಿಗಳನ್ನು, ಆಚಾರ ವಿಚಾರಗಳನ್ನು ಕಂಡು ಗುರುತಿಸಬೇಕು. ಉತ್ತಮ ಕುಲದಲ್ಲೆ ಹುಟ್ಟಿರುವುದಾಗಿ ಹೇಳಿಕೊಳ್ಳುತ್ತಾ ಅನಾಚಾರ ಮಾರ್ಗದಲ್ಲಿ ನಡೆದರೆ ಅವನೆಂಥಕುಲಜ ? ಕೇವಲ ಬಾಯಲ್ಲಿ ಒಳ್ಳೆಯ ಮಾತುಗಳನ್ನಾಡಿದರೆ ಸಾಲದು ನುಡಿಯಂತೆ ನಡೆಯೂ ಶುದ್ಧವಾಗಿರಬೇಕು ಅದು ಬಿಟ್ಟು ಸದಾಚಾರಯುಕ್ತ ಕ್ರಿಯೆಗಳನ್ನು ಕಡೆಗಣಿಸಿ ಪರಸ್ತ್ರೀಯರಿಗೆ ಮನವೆಳೆಸುವವನು ಎಂದಿಗೂ ಉತ್ತಮ ಕುಲಜನೆನ್ನಿಸಿಕೊಳ್ಳಲಾರನು. ವಿನಯಪೂರ್ಣವಾದ ನುಡಿ, ನುಡಿದಂತೆ ನಡೆಯುವ ಪರಿಶುದ್ಧವಾದ ಮಂಗಲಾಚರಣೆ ಎರಡನ್ನು ಅರಿತುಕೊಂಡು ನಡೆಯುವವನೆ ಉತ್ತಮ ಕುಲಜನೆನಿಸಿಕೊಳ್ಳುವನು. ಮೋಹ ವಂಚನೆಗಳಿಂದ ದೂರ ಉಳಿದ ಕೈ "ಕೈಯುಳಿ" ಆಗಬೇಕು. ಮನಸ್ಸಿನಲ್ಲಿ ತುಂಬಿರುವ ಆಸೆ ರೋಷ ಹಮ್ಮು ಬಿಮ್ಮುಗಳನ್ನು ಕತ್ತರಿಸಿಹಾಕುವುದೇ "ಕತ್ತಿ" ಚರ್ಮಕಾರನ ಕಾಯಕದಲ್ಲಿ ಬಡಿತಕ್ಕೆ ಸಿಗುವ "ಅಡಿಗೂಂಟ" ದಂತೆ ಶರೀರವು ಪ್ರಾಕೃತಿಕ ದೇಹಭಾವಕ್ಕೆ ಒಳಗಾಗಿ ಇರುವುದು ಸಹಜವಾಗಿದೆ. ಆದರೆ ಹಾಗಾಗಲು ಬಿಡದೆ ಶುದ್ಧ ಅಂಗವನ್ನು ಹೊಂದಿದವನಾಗಿ ಲಿಂಗವನ್ನು ಪಡೆಯಲು ಯೋಗ್ಯವಾಗುವಂತೆ ನಿಜಾತ್ಮರಾಮರಾಮನನ್ನು ಅರಿತುಕೊಳ್ಳಬೇಕು.

ಮಾದಾರ ಚೆನ್ನಯ್ಯನ ಹುಟ್ಟಿನ ಬಗ್ಗೆ ಪೌರಾಣಿಕವಾಗಿ ಒಂದು ಕಥೆ ಹೀಗೆ ಬರುತ್ತದೆ. ಈತನು ಹಿಂದಿನ ಜನ್ಮದಲ್ಲಿ ಉಪಮನ್ಯು ಎಂಬ ಋಷಿಯಾಗಿದ್ದನು. ಕ್ಷೀರಸಾಗರವನ್ನು ಪಡೆಯುವ ಉದ್ದೇಶದಿಂದ ಒಮ್ಮೆ ಶಿವನನ್ನು ಕುರಿತು ಘೋರ ತಪಸ್ಸು ಮಾಡಿದನು ಆ ಸಮಯದಲ್ಲಿ ಕೆಂಡದ ಮಳೆಗರೆದರೂ ವಿಚಲಿತನಾಗದೆ,

ಪಂಚಾಕ್ಷರಿ ಮಂತ್ರದ ಪ್ರಭಾವದಿಂದ ಎಲ್ಲ ವಿಘ್ನಗಳನ್ನು ಗೆದ್ದು ಧ್ಯಾನದಲ್ಲೇ ಕುಳಿತಿದ್ದನು. ಅವನ ಭಕ್ತಿಗೆ ಮೆಚ್ಚಿದ ಶಿವನು ಉಪಮನ್ಯುವಿಗೆ ಹಾಲ್ಗಡಲನ್ನು ಕರುಣಿಸಿದನು. ಆದರೆ ಇದರಿಂದ ಹಾನಿಗೊಂಡ ವಿಷ್ಣುವು ಶಿವನ ಸತಿ ಗಿರಿಜೆಯ ಬಳಿಬಂದು ತನ್ನ ನಷ್ಟವನ್ನು ತೋಡಿಕೊಂಡು ಕ್ಷೀರಸಾಗರವನ್ನು ತನಗೆ ಮರಳಿ ಕೊಡಿಸುವಂತೆ ಬೇಡಿದನು. ವಿಷ್ಣುವಿನ ಮಾತನ್ನು ಮನ್ನಿಸಿದ ಗಿರಿಜೆ ಉಪಮನ್ಯುವಿನಲ್ಲಿಗೆ ತೆರಳಿ ಅವನಿಂದ ಹೇಳಿದ್ದಕ್ಕೆ ಒಪ್ಪುವಂತೆ ಮೊದಲೇ ಮಾತಿನಭಾಷೆ ತೆಗೆದುಕೊಂಡು ಕ್ಷೀರಸಾಗರವನ್ನು ವಿಷ್ಣುವಿಗೆ ಹಿಂತಿರುಗಿಸುವಂತೆ ಹೇಳಿದಾಗ ಮುನಿ ಇದಕ್ಕೆ ಒಪ್ಪಲ್ಲಿಲ್ಲ. ಅದರಿಂದ ಕೋಪುಗೊಂಡ ಗಿರಿಜೆ ಕೊಟ್ಟಮಾತಿನಂತೆ ನಡೆಯಲಿಲ್ಲದ್ದಕ್ಕೆ "ಭೂಲೋಕದಲ್ಲಿ ಹೀನಜಾತಿಯಲ್ಲಿ ಹುಟ್ಟು"ವಂತೆ ಶಾಪಕೊಟ್ಟಳು. ಆ ಉಪಮನ್ಯು ಮುನಿಯು ಮಾದರಚೆನ್ನಯ್ಯನಾಗಿ ಹುಟ್ಟಿದನು. ಪುರಾಣದ ಕಥೆಯಸತ್ಯತೆಯನ್ನು ಒರೆಹಚ್ಚುವುದಕ್ಕೆ ಹೋಗದೆ ಚನ್ನಯ್ಯ ಹುಟ್ಟುತ್ತಲೇ ಶಿವಭಕ್ತನಾಗಿದ್ದ ಮತ್ತು ಅವನು ದೊಡ್ಡವನಾದಮೇಲೆ ಯಾವಾಗಲೂ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತಿದ್ದ ಎಂಬುದನ್ನಷ್ಟು ಗಮನದಲ್ಲಿಟ್ಟು ಕೊಂಡರೆ ಸಾಕು.

ಬಸವಣ್ಣನ ಹಿರಿಯ ಸಮಕಾಲೀನನಾದ ಮಾದಾರ ಚೆನ್ನಯ್ಯನು ಕಂಚಿ ಪಟ್ಟಣದಲ್ಲಿ ಕರಿಕಾಲಚೋಳ ಮಹಾರಾಜನ ಅರಮನೆಯ ಕುದುರೆಗಳಿಗೆ ಹುಲ್ಲು ತಂದು ಹಾಕುವ ಕಾಯಕ ಕೈಕೊಂಡಿದ್ದನು. ಹೊರಗಿನ ವೇಷಕ್ಕೆ ಮಾದರನಂತೆ ತೋರುತ್ತಿದ್ದರೂ ಅಂತರಂಗದಲ್ಲಿ ಮಹಾಶಿವಭಕ್ತನಾಗಿದ್ದನು. ತನ್ನ ಜೊತೆಯ ಕಬಾಡಿಗರೊಡನೆ ಕಾಡಿಗೆ ಹೋಗಿ ಹುಲ್ಲು ಸಂಗ್ರಹಿಸುವ ಕೆಲಸವಾದ ಮೇಲೆ ಈತ ಗುಪ್ತ ಭಕ್ತನಾಗಿ ತನ್ನ ಪೂಜೆ ಧ್ಯಾನಗಳನ್ನು ನಡೆಸುತ್ತಿದ್ದನು ಯಾರಿಗೂ ತೋರದಂತೆ ಲಿಂಗಪೂಜೆ ಮತ್ತು ಪಂಚಾಕ್ಷರಿ ಮಂತ್ರ ಧ್ಯಾನವನ್ನು ಮಾಡುತ್ತಿದ್ದ ಈತ ಗುಪ್ತ ಭಕ್ತನಾಗಿದ್ದನು. ಸರ್ವಾಂಗಲಿಂಗಿಯಾದ ಚೆನ್ನಯ್ಯನ ಸರ್ವಕ್ರಿಯೆಗಳೂ ಲಿಂಗ ಪೂಜೆಯಾಗುತ್ತಿದ್ದವು. ಚೆನ್ನಯ್ಯನ ಕ್ರಿಯೆಗಳೆಲ್ಲ ಲಿಂಗಕ್ರಿಯೆಗಳೇ ಆದರೆ ಇದು ಶಿವನನ್ನುಳಿದು ಬೇರೆಯವರಿಗೆ ಯಾರಿಗೂ ಕಂಡು ಬರದು.

ಪ್ರತಿದಿನ ಕಾಯಕದಿಂದ ದಣಿದು ಮನೆಗೆ ಬಂದಾಗ, ಆತನ ಸತಿ ಅಂಬಲಿಮಾಡಿ ಪತಿಯದಾರಿ ನೋಡುತ್ತಿದ್ದಳು. ಆಗ ಚೆನ್ನಯ್ಯ ತನ್ನ ಸ್ನಾನ ಪೂಜಾದಿಗಳನ್ನು ಮುಗಿಸಿ ಭಕ್ತಿ ಒಲವುಗಳಿಂದ ಅಂಬಲಿಯನ್ನು ಶಿವನಿಗೆ ಅರ್ಪಣಮಾಡಿ ಆಮೇಲೆ ಸೇವಿಸು-ತ್ತಿದ್ದನು. ಅಂಬಳಕದೊಡನೆ ಬೆರೆತ ಭಕ್ತಿಯೊಲವಿನ ಅಮೃತದ ಸವಿಗೆ ಶಿವನೂ ಮಾರುಹೋಗುತ್ತಿದ್ದನು. ಚೆನ್ನಯ್ಯನ ಭಕ್ತಿಭಾವ ಕಂಡು ಸಂಪ್ರೀತನಾಗುತ್ತಿದ್ದನು. ಇದೇ ರೀತಿ ಶಿವಭಕ್ತ ಚೆನ್ನಯ್ಯನ ಶಿವಭಕ್ತಿ ಅರವತ್ತು ವರ್ಷಗಳವರೆಗೆ ಸಾಗಿತು. ಶಿವನ ಹೊರತಾಗಿ ಈತನ ಭಕ್ತಿಯ ಆಳವನ್ನು ಯಾರು ಅರಿಯರು. ಎಲ್ಲರ ದೃಷ್ಟಿಯಲ್ಲಿ ಚೋಳರಾಜನ ಮನೆಯ ಕುದುರೆಗಳಿಗೆ ಹುಲ್ಲು ತಂದೊದಗಿಸುವ ಕೂಲಿಕಾರ ಮಾತ್ರವಾಗಿದ್ದನು. ಅನ್ಯರಿಗೆ ಗುರುತುಕೂಡ ಹತ್ತದಂತೆ ಅರವತ್ತು ವರ್ಷಗಳು



ಸತತವಾಗಿ ತನ್ನಿ ಭಕ್ತಿಧಾರೆಯನ್ನು ಎರೆದ ಈ ಮಹಾಭಕ್ತನ ಭಕ್ತಿಯನ್ನು ಎಲ್ಲರಿಗೂ ಪ್ರಕಟಗೊಳಿಸಬೇಕೆಂಬ ಇಚ್ಛೆ ಶಿವನಿಗುಂಟಾಯಿತು.

ಕಂಚಿನಗರದ ದೇವಾಲಯದಲ್ಲಿ ಶಿವಭಕ್ತನಾದ ಕರಿಕಾಲಚೋಳನು ಪ್ರತಿದಿನ ಬೆಳಿಗ್ಗೆ ಪೂಜಾದಿಗಳನ್ನು ನಡೆಸಿ ಶಿವನ ನೈವೇದ್ಯಕ್ಕೆಂದು ಅನೇಕ ವಿಧದ ಮಷ್ಟಾನ್ನಭೋಜನವನ್ನು ತಂದಿರಿಸುತ್ತಿದ್ದನು. ರಾಜ ಎಡೆಮಾಡಿದ ಭಕ್ಷ್ಯ ಭೋಜ್ಯಗಳನ್ನು ಶಿವನು ಆಮೇಲೆ ಸ್ವೀಕರಿಸುತ್ತಿದ್ದನು. ಇದು ಪ್ರತಿದಿನ ನಡೆದು ಬಂದಿದ್ದ ಪದ್ಧತಿ. ಒಂದು ರಾತ್ರಿ ಚೆನ್ನಯ್ಯ ಎಂದಿನಂತೆ ತನ್ನ ಕಾಯಕ ಮುಗಿಸಿ ಬಂದವನು ಸ್ನಾನಪೂಜೆ ಧ್ಯಾನಾದಿಗಳನ್ನು ಮಾಡಿ ಸವಿಯಾದ ಅಂಬಳಕವನ್ನು ಶಿವನಿಗೆ ಸಮರ್ಪಿಸಿದನು. ಆಗ ಶಿವನು ಪ್ರತ್ಯಕ್ಷವಾಗಿ ಬಂದು ತನ್ನ ಭಕ್ತನಿಂದ ಅಂಬಲಿಯನ್ನು ತೆಗೆದುಕೊಂಡು ಸೇವಿಸಿದನು. ಅಂಬಲಿಯ ಗುಟುಕಿನಲ್ಲಿದ್ದ ಅಮೃತದ ಸವಿಗೆ ಮಾರುಹೋಗಿ ಹೊಟ್ಟೆ ತುಂಬ ಸುರಿದುಕೊಂಡನು. ಯಾವ ಮೃಷ್ಟಾನ್ನವೂಅಂಬಲಿಯ ಸವಿಗೆ ಸಮವೆನಿಸಲಿಲ್ಲ. ಸರ್ವಾರ್ಪಣಭಾವದಿಂದ ಅರ್ಪಿಸಿದ ಅಂಬಳಕದಲ್ಲಿ ಚೆನ್ನಯ್ಯ ಭಕ್ತಿಒಲವುಗಳ ಮಹಾಪೂರವೇ ತುಂಬಿಕೊಂಡು ಹರಿದಿತ್ತು ಶಿವನು ಅಂಬಲಿಯ ಮೊದಲನೆಯ ಸುರಿಕೆಗೇ ಭಕ್ತ ಚೆನ್ನಯ್ಯನಿಗೆ ಶಿವಪಾದವನ್ನಿತ್ತನಂತೆ! ಇನ್ನು ಎರಡನೆಯ ಸುರುಕೆಗೆ ಏನು ಕೊಡಬೇಕೆಂಬ ಜಿಜ್ಞಾಸೆ ಹುಟ್ಟಿತಂತೆ ಆ ಪರಶಿವನಿಗೆ! ಈ ಪ್ರಸಂಗ ಹರಹರಿ ಕವಿಯ ರಗಳೆಯಲ್ಲಿ ಬಹಳಸೊಗಸಾಗಿ ವರ್ಣಿಸಲ್ಪಟ್ಟಿದೆ ಒಟ್ಟಿನಲ್ಲಿ ಮಹಾಭಕ್ತ ಚೆನ್ನಯ್ಯನ ಭಕ್ತಿಸುಧೆತುಂಬಿ ಅಂಬಳಕದಸವಿ ಹೆಚ್ಚಾಗಿ ಒಲವಿನಿಂದ ನೀಡಿದ ಅಂಬಲಿಯನ್ನು ಶಿವನು ಹೊಟ್ಟೆತುಂಬ ಸುರಿದುಕೊಂಡನು ಸಂತುಷ್ಟನಾದನು.

ಮಾರನೆಯ ದಿನ ಎಂದಿನಂತೆ ಕರಿಕಾಲಚೋಳನು ಪೂಜಾದಿಗಳನು ಮಾಡಿ ಮುಗಿಸಿ ಶಿವನ ಸಲುವಾಗಿ ಬಗೆಬಗೆಯ ಅಮೃತಾನ್ನಗಳನ್ನು ನೈವೇದ್ಯ ಮಾಡಿದನು. ಆದರೆ ಎಷ್ಟುಹೊತ್ತಾದರೂ ನಿತ್ಯದಂತೆ ಶಿವನು ಬಂದು ಉಣ ಬಡಿಸಿದ್ದನ್ನು ಸ್ವೀಕರಿಸಲೇ ಇಲ್ಲ. ಅದನ್ನು ಕಂಡು ನೊಂದು ರಾಜನು ತನ್ನ ನಡೆಯಲ್ಲಿ ಏನೋ ಕುಂದಿರಬೇಕೆಂದು ಅದಕ್ಕೆ ಶಿವನು ಪ್ರಸಾದವನ್ನು ಸ್ವೀಕರಿಸಿಲ್ಲವೆಂದು ಬಗೆದು ತನ್ನನ್ನು ಕತ್ತಿಯಿಂದ ಇರಿದುಕೊಂಡು ಪ್ರಾಣಾರ್ಪಣೆ ಮಾಡಲು ಹೋದಾಗ ಶಿವನು ಬಂದು ರಾಜನನ್ನು ತಡೆದು "ರಾತ್ರಿ ಭಕ್ತ ಚೆನ್ನಯ್ಯನ ಮನೆಯ ಅಂಬಲಿ ಸವಿಯಾಗಿತ್ತೆಂದು ಹೆಚ್ಚು ಕುಡಿದದ್ದರಿಂದ ಇನ್ನೂ ಹಸಿವಿಲ್ಲ. ಊಟಮಾಡದಿರಲು ಕಾರಣ ಇಷ್ಟೇ ಹೊರತು ನಿನ್ನಲ್ಲಿ ಯಾವ ತಪ್ಪು ಇಲ್ಲ" ಎಂದು ಹೇಳಿದನು. ಶಿವನನ್ನು ತನ್ನೊಡನೆ ಕರೆದುಕೊಂಡು ಆತನಿಗೆ ಸವಿಯಾದ ಅಂಬಲಿಯನ್ನು ಹೊಟ್ಟೆ ತುಂಬ ತೃಪ್ತಿಯಾಗುವಂತೆ ಕುಡಿಸಿದ ಚೆನ್ನಯ್ಯನ ಭಕ್ತಿ ಎಷ್ಟು ಹಿರಿದಾದದು! ಮೊದಲು ಆ ಭಕ್ತನನ್ನು ಕಂಡು ಶರಣಾಗಬೇಕೆನಿಸಿತು. ರಾಜನಿಗೆ ತಾನೊಬ್ಬ ಮಹಾರಾಜ ಎಂಬ ಪರಿವೆಯೊ ಇಲ್ಲದಂತೆ ಕಂಚಿಪಟ್ಟಣದ ಸಂದಿ ಬೀದಿಗಳಲ್ಲಿ ನಡೆದು ಹೊಲಗೇರಿಯಲ್ಲಿದ್ದ ಚೆನ್ನಯ್ಯನ ಮನೆಗೆಬಂದನು. ಅವನು ಹಿಂದೆಯೆ ರಾಜ ಪರಿವಾರವೂ ಬಂದಿತ್ತು. ಮನಸ್ಸು

ಮಾಡಿದರೆ ಚೋಳರಾಜನು ಕೇವಲ ಒಬ್ಬ ಕೂಲಿಕಾರನಾಗಿದ್ದ ಚೆನ್ನಯ್ಯನನ್ನು ತನ್ನ ಅರಮನೆಗೆ ಕರೆಸಿ ನೋಡಬಹುದಾಗಿತ್ತು. ಆದರೆ ಆ ಗಳಿಗೆಯಲ್ಲಿ ತಾನು ರಾಜನೂ ಅಲ್ಲ, ಚೆನ್ನಯ್ಯ ಹುಲ್ಲು ತರುವ ಒಬ್ಬ ಕೂಲಿಕಾರನೂ ಅಲ್ಲ. ತನ್ನ ಭಕ್ತಿಧಾರೆ ಎರೆದು ಶಿವನಿಗೆ ಅಂಬಲಿಯನ್ನು ಉಣಿಸಿದ ಮಹಾಭಕ್ತ, ಮಾದರ ಚನ್ನಯ್ಯ ತನಗಿಂತಲೂ ಮಿಗಿಲಾದ ಭಕ್ತ ಉನ್ನತ ಭಕ್ತಿಯನ್ನು ಕಂಡು ರಾಜದಂಗಾಗಿದ್ದಾನೆ "ನೀನೊಲಿದ ಕುಲಕ್ಕೆ ನೀನೊಲ್ಲದ ಹೊಲೆಗೆ ಮೇರೆಯುಂಟೆ ದೇವಾ" ? ಚೆನ್ನಯ್ಯನ ಕುಟೀರಕ್ಕೆ ಧಾವಿಸಿ ಬಂದನುರಾಜ. ಚೆನ್ನಯ್ಯನನ್ನು ಕಂಡು ಬಾಗಿ ನಮಿಸಿದನು. ಊರ ದೊರೆಗಳು ಮಹಾಜನರು ಅಷ್ಟೇ ಅಲ್ಲ ಉತ್ತಮಕುಲದಲ್ಲಿ ಜನಿಸಿದವರು ಇಂಥ ಶ್ರೇಷ್ಠರು ತನಗೆ ಮಣಿಯುವುದೆ? ತತ್ತರಿಸಿದ ಚೆನ್ನಯ್ಯ ಹುಟ್ಟಿದಕುಲ ಹೀನ ಇರಬಹುದು ಆದರೆ ಸಾಧಿಸಿರುವ ಭಕ್ತಿಯ ಉತ್ಕೃಷ್ಟತೆ? ಶಿವನು ಯಾರಿಗೆ ಒಲಿದುಕರುಣಿಸುತ್ತಾನೆಯೋ ಆತನೇ ಕುಲಜನು, ಆತನಿಗಿಂತ ಉತ್ತಮರುಂಟೆ ? ಸರಿಸಾಟಿಯುಂಟೆ ? ದೇವ ದೇವ ದೇವನೊಲಿದವನ ಕುಲ ಸತ್ಕುಲಂ ಘನಮಹಿಮನೊಲಿದ ಜಾತಿಯು ಜಾತಿ ನಿರ್ಮಲಂ ಶರ್ವನೊಡನುಂಬ ಜಾತಿಗಾಂ ಸರಿಯೆ ? ಸರ್ವಜ್ಞ ನಿಮ್ಮ ಕೆರವಿಂಗೆನ್ನ ಶಿರ ಸರಿಯೆ? ಎಂದು ಶಿವಭಕ್ತ ಚೆನ್ನಯ್ಯನ ಭಕ್ತಿಯನ್ನು ಕೊಂಡಾಡಿದ ರಾಜನ ಆತನನ್ನು ಊರತುಂಬ ಆನೆ ಅಂಬಾರಿ ಮೇಲೆ ಮೆರೆಸಿದನಂತೆ

ಅರುವತ್ತು ವರ್ಷಗಳಿಂದ ಗುಪ್ತ ರೀತಿಯಲ್ಲಿ ಮಾಡುತ್ತಿದ್ದ ಭಕ್ತಿಯನ್ನು ಪ್ರಕಟಗೊಳಿಸಿದ್ದಕ್ಕಾಗಿ ಶಿವನ ಮೇಲೆ ಚೆನ್ನಯ್ಯನಿಗೆ ಮುನಿಸು. ಎಲ್ಲರೂ ಆತನ ಶಿವಭಕ್ತಿಯನ್ನು ಕೊಂಡಾಡುವುದನ್ನು ಕಂಡ ಶಿವನಿಗೆ ಆನಂದ. ಆದರೆ ಚೆನ್ನಯ್ಯನಿಗೆ ಅದು ಬೇಡವಾದ ವಿಷಯ. ನಿರ್ಮಲವಾದ ಮನದಿಂದ ಭಕ್ತಿಮಾಡಿ ನಿಶ್ಚಿಂತೆಯಿಂದ ಇದ್ದವನಿಗೆ ಜನರಮನ್ನಣೆ ಗೌರವಗಳು ಮುಸಿದ ಅಲುಗಿನಂತಾಗುತ್ತವೆ ಗುಪ್ತಭಕ್ತಿ ಹಿತಕಂಡವನಿಗೆ ತನ್ನ ಭಕ್ತಿಯನ್ನು ಎಲ್ಲರೆದುರು ತೋರಿಸಿದ್ದಕಾಗಿ ನೋವಿದೆ ಜೊತೆಗೆ ಶಿವನೊಡನೆ ಸಿಟ್ಟು ತಾಳಿದವನು. ಅದಕ್ಕಾಗಿ ತನ್ನ ಪ್ರಾಣವನ್ನೆ ತ್ಯಾಗಮಾಡುಲು ಅಣಿಯಾದನು. ಆಗ ಶಿವನು ಆತನನ್ನು ಸಮಾಧಾನಪಡಿಸಿ, ಭಕ್ತ ಶ್ರೇಷ್ಠನೆಂದುಕೊಂಡಾಡಿ ಆತನಿಗೆ ಶಿವಪದವನಿತ್ತನು.

ನಡೆಚೆನ್ನ, ನುಡಿಚೆನ್ನ ಎಲ್ಲಿನೋಡಿದಡೆಚೆನ್ನ !
ಪ್ರಮಥರೊಳಗೆ ಚೆನ್ನ ಪುರಾತರೊಳಗೆ ಚೆನ್ನ
ಸವಿನೋಡಿ ಅಂಬಲಿಯು ರುಚಿಯಾಯಿತೆಂದು
ಕೂಡಲಸಂಗಮದೇವಂಗೆ ಬೇಕೆನ್ನ ಕೈದೆಗೆದು ನಮ್ಮ ಚೆನ್ನ !

ಎಂಬ ಬಸವಣ್ಣನವರ ವಚನದಲ್ಲಿ ಚೆನ್ನಯ್ಯನ ಭಕ್ತಿಯು ಚೆನ್ನು ಎಷ್ಟು ಉನ್ನತವಾದುದಾಗಿತ್ತು ಎಂಬುದು ಎದ್ದು ತೋರುವಂತಿದೆ. ಅವರ ಇನ್ನೂ ಅನೇಕ ವಚನಗಳಲ್ಲಿ ಹಿರಿಯ ಮಹೇಶ್ವರರು ಮಾದರ ಚೆನ್ನಯನನ್ನು ಪೂಜ್ಯ ಸ್ಥಾನದಲ್ಲಿಟ್ಟುಕೊಂಡಿದ್ದಾರೆ. ಉನ್ನತಮಹಿಮೆ ಉಮೇಶನಿಂದಧಿಕ ಮಾದಾರ ಚೆನ್ನಯನ ಮಗನಾನು ಎಂಬ ಬಸವಣ್ಣನವರ ಮಾತಿನಿಂದ ಶರಣರಿದ್ದಾರೆ ಚೆನ್ನಯ್ಯನ ನಿಲವು ಎಷ್ಟು ಎತ್ತರವಾದುದಾಗಿತ್ತೆಂದು ಅರಿಯಬಹುದು.

## ಕ್ಷೇತ್ರವಾರ್ತೆ

—ಹೆಚ್. ಬಿ. ಗಂಗಾಧರಯ್ಯ

ಶ್ರೀಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ನವಂಬರ್ 26 1996 ಮಂಗಳವಾರ 41 ನೇ ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು.

ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಡಿ. ಬಿ. ಕಲ್ಮಣ್‌ಕರ್ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿ ನಮ್ಮ ನಾಡಿನ ಇತಿಹಾಸ ಪ್ರಾಚೀನವಾದುದು. ಕರ್ನಾಟಕ ಪುನರ್ರಚನೆಯಾದ ಮೇಲೆ 1956 ರಿಂದ ಕನ್ನಡ ಪ್ರಸಾರದ ಬೆಳವಣಿಗೆ ಸುಧಾರಣೆಯಾಗಿ ಆರ್ಥಿಕವಾಗಿ ನಾಡು ಮುನ್ನಡೆದಿದೆ. ಆದಾಗ್ಯೂ ಸಾಮಾಜಿಕವಾಗಿ, ಆರ್ಥಿಕವಾಗಿ ಅನೇಕ ಸಮಸ್ಯೆಗಳು ಉದ್ಭವಿಸಿ ಅನ್ಯಾಯಗಳಾಗುತ್ತಿವೆ ಸತ್ಯ. ಅಸತ್ಯ, ಹಿಂಸೆ-ಅಹಿಂಸೆ, ಪ್ರೇಮ-ಪ್ರೀತಿ ವೈಷಮ್ಯ ಸ್ಥಾನಕ್ಕೆ ಹೋಗುತ್ತಿವೆ. ಮಾನವ ಸಮಾಜ ಎಲ್ಲೆ ಮೀರಿ ಎಲ್ಲ ಕ್ಷೇತ್ರಗಳಲ್ಲಿ ಶೋಷಣೆಗೆ ಒಳಗಾಗಿದೆ. ದುರಾಸೆಯೇ ದೈವವಾಗಿ ರಾಷ್ಟ್ರವನ್ನು ವ್ಯಾಪಿಸಿದೆ. ಟಿ. ವಿ. ಕಾರ್ಯಕ್ರಮದ ಪ್ರಭಾವದ ಬಗ್ಗೆ ಪ್ರಸ್ತಾಪಿಸಿ ಯುವಜನತೆ ಅದರಲ್ಲೂ ವಿದ್ಯಾರ್ಥಿಗಳು ನೈತಿಕವಾಗಿ ಅಧಃಪತನಕ್ಕೊಳಗಾಗಿ ಅಮೂಲ್ಯವಾದ ಓದಿನ ವೇಳೆಯನ್ನು ಕಬಳಿಸುವಂತಾಗಿದೆ. ಸೆನ್ಸಾರ್ ಮಂಡಳಿ ಕಡಿವಾಣ ಹಾಕದಿದ್ದರೆ ಜನತೆ ಆಂದೋಲನ ಎಬ್ಬಿಸಲು ಸಂಘಟಿತರಾಗಬೇಕೆಂದು ಎಚ್ಚರಿಸಿದರು.

ಶ್ರೀಮಠದ ಬೆಳವಣಿಗೆ ಬಗ್ಗೆ ಮಾತನಾಡಿ ಸಿದ್ಧಗಂಗೆ ಜಾತ್ಯಾತೀತವಾಗಿ 5 ಸಹಸ್ರ ವಿದ್ಯಾರ್ಥಿಗಳಿಗೆ ಆಶ್ರಯವಾಗಿದೆ. ಪೂಜ್ಯ ಸ್ವಾಮಿಗಳು 850 ವರ್ಷಗಳ ಹಿಂದೆ ಬಸವೇಶ್ವರರು ಮಾಡಿದ ಕೆಲಸ ಇಲ್ಲಿ ಮಾಡಿದ್ದಾರೆ. ಕರ್ನಾಟಕದಲ್ಲಿ ಕೀರ್ತಿ ಕಳಸಪ್ರಾಯವಾದ ಮಠವಾಗಿದೆ. ಶ್ರೀ ಶ್ರೀ ಗಳವರು ನಿರಂತರ ಶ್ರಮವಹಿಸಿ ಅದ್ಭುತ ಕಾರ್ಯಸಾಧಿಸಿದ್ದಾರೆ. ಶ್ರೀ ಮಠಕ್ಕೆ ಭೇಟಿ ನೀಡಬೇಕೆಂಬ ಹಂಬಲ ತೀರ್ವವಾಗಿತ್ತು. ಆ ಸುಯೋಗ ಒದಗಿ ಬಂದುದಕ್ಕೆ ಸಂತೋಷವಾಗಿದೆ. ಇಲ್ಲಿಯ ಶ್ರೀ ಶ್ರೀಗಳ ವಜ್ರಮಹೋತ್ಸವ ಸ್ಮಾರಕ ಕಟ್ಟಡಗಳನ್ನು ನೋಡಿ ಪ್ರಭಾವಿತನಾಗಿದ್ದೇನೆ. ಧಾರ್ಮಿಕ ಸಾಧನೆಗೆ ಶ್ರೀ ಶ್ರೀಗಳ ಮಾರ್ಗದರ್ಶನದಲ್ಲಿ ಇಲ್ಲಿ ವ್ಯಾಪಕ ಅವಕಾಶವಿದೆ. ವಿದ್ಯಾರ್ಥಿಗಳು ಸರಿಯಾದ ಮಾರ್ಗದಲ್ಲಿ ಸದುಪಯೋಗ ಪಡಿಸಿಕೊಂಡು ನಮ್ಮ ಭಾರತದ ಹಿರಿಮೆಗಳನ್ನು ಮೈಗೂಡಿಸಿಕೊಳ್ಳಬೇಕೆಂದು ಕರೆಯಿತ್ತರು.

ದಿವ್ಯ ಸಾನಿಧ್ಯವಹಿಸಿ ಶ್ರೀ ಶ್ರೀಗಳು ಮಾತನಾಡಿ ಭಾರತೀಯರಾದ ನಾವು ನಮ್ಮತನ ಕಳೆದುಕೊಂಡಿದ್ದೇವೆಂದು ವಿಷಾದ ವ್ಯಕ್ತಪಡಿಸಿದರು. ಅರವಿಂದ, ಗಾಂಧಿ, ನೆಹ

ರೂರವರ ಆದರ್ಶ ಗುರಿಗಳನ್ನು ಮುಟ್ಟುವಲ್ಲಿ ವಿಫಲರಾಗಿದ್ದೇವೆ. ಆರ್ಥಿಕ, ಶೈಕ್ಷಣಿಕ, ಮತ್ತು ಧಾರ್ಮಿಕತೆಗೆ ನಾಡು ಮತ್ತು ರಾಷ್ಟ್ರ ಮೂಲಸ್ಥಾನಗಳಾಗಿವೆ- ಆದರೆ ಸ್ವಾತಂತ್ರಗಳಿಸಿ 50 ವರ್ಷಗಳು ಕಳೆದರೂ ವರ್ಗರಹಿತ ಸಮಾಜ ನಿರ್ಮಾಣವಾಗಿಲ್ಲದೆ ಇರುವುದು ದೊಡ್ಡಕೊರತೆಯಾಗಿದೆ. ಇಂತಹ ವೈಚಾರಿಕತೆಯನ್ನು ಬೆಳೆಸಿಕೊಂಡು ಜಪಾನ್ ಜರ್ಮನ್ ದೇಶಗಳು ವಿಶ್ವದಲ್ಲಿ ಪ್ರಖ್ಯಾತವಾಗಿವೆ- ಎಲ್ಲಾ ಸಂಪನ್ಮೂಲಗಳು ನಮ್ಮಲ್ಲಿ ಲಭ್ಯವಿದೆ. ಆ ರಾಮು ಜೀವನದ ಸೋಗಿನಿಂದ ನಿಷ್ಕ್ರಿಯರಾಗುತ್ತಿದ್ದೇವೆ. ಇದರ ಪರಿಣಾಮವಾಗಿ ಭ್ರಷ್ಟಾಚಾರ ಸರ್ವವ್ಯಾಪಿಯಾಗಿ ಬೆಳೆದಿದೆ. ಇಂತಹ ರಾಷ್ಟ್ರಘಾತಕ ಶಕ್ತಿಗಳು ತಲೆ ಎತ್ತದಂತೆ ಎಲ್ಲಾ ಧರ್ಮೀಯರು ಮಾರ್ಗದರ್ಶನ ಮಾಡಿದ್ದಾರೆ. ಇದನ್ನು ವಿದ್ಯಾರ್ಥಿಗಳು ಅರಿತು ಭವಿಷ್ಯ ಬಾಳನ್ನು ಉದ್ದೀಪನಗೊಳಿಸಬೇಕೆಂದು ಆಶೀರ್ವಸಿದರು.

ಬಸವ ಪಥ ಪ್ರಧಾನ ಸಂಪಾದಕರು, ನಿವೃತ್ತ ವಯಸ್ಕರ ಶಿಕ್ಷಣ ನಿರ್ದೇಶಕರಾದ ಪ್ರೊ. ಬಿ. ವಿರೂಪಾಕ್ಷಪ್ಪ ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಕರ್ನಾಟಕ 2000 ವರ್ಷಗಳ ಇತಿಹಾಸ ಹೊಂದಿದೆ. ಗಂಗರು, ಕದಂಬರು, ಚಾಳುಕ್ಯರು ಹೊಯ್ಸಳರು ಆಳಿ ತಮ್ಮದೇ ಆದ ಪರಂಪರೆ ಮತ್ತು ಸಂಸ್ಕೃತಿಯ ಪ್ರಭಾವವನ್ನುಂಟುಮಾಡಿದ್ದಾರೆ. 49 ವರ್ಷಗಳ ಹಿಂದೆ ವಿಶಾಲ ಕರ್ನಾಟಕ ಸ್ಥಾಪನೆಯಾಯಿತು. ಇನ್ನೂ ನಾಡಿನ ಏಕತೆ ಮತ್ತು ಸಮಗ್ರತೆ ಪರಿಪೂರ್ಣತೆ ಹೊಂದಿಲ್ಲ. ಅನೇಕ ಸಮಸ್ಯೆಗಳನ್ನು ಪರಿಹಾರ ಮಾಡಬೇಕಾಗಿದೆ.

ಆಡಳಿತ ಭಾಷೆಯಾಗಿ ಕನ್ನಡ ಪರಿಪುಷ್ಟಿಯಾಗಿ ಬೆಳೆದಿಲ್ಲ. ಪ್ರತ್ಯೇಕ ರಾಜ್ಯಗಳ ಬಗ್ಗೆ ಕೂಗು (ಕೊಡಗುರಾಜ್ಯ, ಉತ್ತರಕರ್ನಾಟಕರಾಜ್ಯ.) ಗಡಿನಾಡು ಸಮಸ್ಯೆಯಿಂದಾಗಿ ಆಕ್ರಮಣ ಸ್ವಭಾವ. ಇವುಗಳ ಬಗೆಗೆ ಪರ್ಯಾಲೋಚಿಸಿ ವಿವೇಚನೆಯಿಂದ ಸಮಸ್ತ ಕನ್ನಡಿಗರು ಜಾಗೃತರಾಗಬೇಕು.

ಕರ್ನಾಟಕ ಸಮೃದ್ಧ ಸ್ವಾಭಿಮಾನಿ ರಾಜ್ಯವಾಗಲು ಗಂಗಾ–ಕಾವೇರಿ ನದಿಗಳ ಸಂಪರ್ಕ ಶೀಘ್ರವಾಗಿ ನೆರವೇರಬೇಕೆಂದು ಆಶಿಸಿದರು.

ಪ್ರಾರಂಭದಲ್ಲಿ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆ ನಂತರ ಶ್ರೀ ಬಸವೇಶ್ವರ ಶಿಕ್ಷಕತರಬೇತಿ ಸಂಸ್ಥೆಯ ಶಿಕ್ಷಣಾರ್ಥಿಗಳು ಶ್ರೀ ಬಿ. ಎಸ್. ಮಲ್ಲಿಕಾರ್ಜುನಯ್ಯನವರ ನಿರ್ದೇಶನದಲ್ಲಿ ನಾಡಗೀತೆಗಳನ್ನು ಹಾಡಿದರು. ಹೆಚ್. ಬಿ. ಗಂಗಾಧರಯ್ಯ ಸ್ವಾಗತಿಸಿದರು. ಆರ್. ವೀರಣ್ಣ ವಂದಿಸಿದರು. ನಂದೀಶ್ ಕಾರ್ಯಕ್ರಮ ನಿರೂಪಿಸಿದರು.



## ಮೃತ್ಯು ಮುಟ್ಟದ ಮುನ್ನ

ಲೇಖಕರು : ಎಂ. ಕೆ. ಭಾನೆಂಗಿ, ಕೃಷಿ ಇಲಾಖೆ, ಅಥಣಿ.

ಭಯವೇಕೆ ಮುದ್ದು ಜೀವವೆ
ಬಯಸಿ ಬರುವ ಮೃತ್ಯುವಿಗೆ
ಕಾಯದೊಳಡಗಿರುವ ಚೇತನಾ-
ಮಯ ಆತ್ಮಂಗೆ ಮರಣ ಉಂಟೆ ?

ಎನಿತು ಕಾಲ ಕಾಯುವೆ ನೆಲದ ಮೇಲೆ
ಕೊನೆ ಇಲ್ಲವೇನು ? ಮರುಳೆ ಈ
ತನುವು ಉರುಳಿ ಬೀಳುವ ಮುನ್ನ
ನೆನೆಸು ನೆಮ್ಮದಿಯಿಂ ಗುರುಸಿದ್ಧಲಿಂಗನನು

ಉಸಿರಿರುವರು ಮಹಾನುಭಾವರು
ವಸುಧೆಯೊಳ್ ಹುಟ್ಟಬರುವದು ದುರ್ಲಭಂ
ತುಸು ಆಲೋಚನ ಗೈದು ನಡೆ
ಕುಸಿಯದಿರಲಿಬಾಳು ವ್ಯರ್ಥದಿಂ

ನೆರೆನಂಬು ಹೆದರದಿರು ಬರಲಿ
ಕರಿಕಾರ್ಮೋಡಗಳು ಜೀವನದಿ, ಮಳೆ
ಸುರಿದ ಬಳಿಕವೇ ಸೂರ್ಯೋದಯ
ಕರಗದಿರಲಿ ಭಕ್ತಿ ವಿಶ್ವಾಸ ಗುರುವಿನಲಿ

ಗಳಿಕೆ ಉಳಿಕೆಯಲಿಯೇ ವ್ಯಯಿಸದಿರು
ಇಳೆಯ ಬದುಕನು, ಹಂಬಲಿಸಿ ಆರಾಧಿಸ
ಅಳಿಯದ' ಅಂತರಂಗದಾನಂದವನು ಈ
ಬಾಳ ಬೆಳಕಿಗೆ ಕತ್ತಲಾವರಿಸುವ ಮುನ್ನ

ಉಳಿತಾಯವೇ ಆಪದ್ಧನ! ಆಪದ್ಧನವೇ ನಿಮ್ಮ ಭವಿಷ್ಯ!

ತುಮಕೂರು ನಗರದ ಅತ್ಯುತ್ತಮ ಸಹಕಾರಿ ಬ್ಯಾಂಕ್

## ನಿಮ್ಮ ಸುಭದ್ರ ಭವಿಷ್ಯತೆಗಾಗಿ ನಮ್ಮ ಉಳಿತಾಯ ಯೋಜನೆಗಳಲ್ಲಿ ಭಾಗವಹಿಸಿರಿ........!

## ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಕೇಂದ್ರ ಕಛೇರಿ : ಶ್ರೀ ಜಯಚಾಮರಾಜೇಂದ್ರ ರಸ್ತೆ,
ತುಮಕೂರು–572 101 ಫೋನ್ ನಂ. 74514

ಅಶೋಕ ನಗರ ಶಾಖೆ : ಸರ್ಕಾರಿ ಕಾಲೇಜ್ ಮುಂಭಾಗ, ತುಮಕೂರು.
ಗುಬ್ಬಿ ಶಾಖೆ : ಜವಳಿಪೇಟೆ, ಬಸ್ ನಿಲ್ದಾಣದಬಳಿ, ಗುಬ್ಬಿ.

ಎಲ್ಲರಲ್ಲೂ ಉಳಿತಾಯ ಹಾದಿಗಾಗಿ ಸದವಕಾಶವನ್ನು ನಿವೇದಿಸುವುದು.

ನಮ್ಮ ಯೋಜನೆಗಳು : ಮಕ್ಕಳ ಕಲ್ಯಾಣ ನಿಧಿ, ಸ್ವರ್ಣಗೌರಿ ನಿಧಿ, ನಿಶ್ಚಿತ ಠೇವಣಿ, ಉಳಿತಾಯ ಖಾತೆ, ಕ್ಯುಮುಲೇಟಿವ್ ಡಿಪಾಜಿಟ್, ವರಲಕ್ಷ್ಮಿ ಕ್ಯಾಷ್ ಸರ್ಟಿಫಿಕೇಟ್, ಮಹೇಶ್ವರ ನಿತ್ಯನಿಧಿ (ಪಿಗ್ಮಿಯೋಜನೆ) ವಿಶ್ರಾಂತಿ ಯೋಜನೆ, ಸಿದ್ಧಗಂಗಾ ಭವಿಷ್ಯ ನಿಧಿ ಯೋಜನೆ, ಗಿಫ್ಟ್ ಚೆಕ್ ಯೋಜನೆ.

ಬ್ಯಾಂಕ್ ಠೇವಣಿದಾರರಿಗೆ ರಕ್ಷಣೆ

## ಡಿಪಾಜಿಟ್ ಇನ್ಶೂರೆನ್ಸ್ ಕಾರ್ಪೊರೇಷನ್

ಠೇವಣಿ ವಿಮಾಯೋಜನೆಯ ಪ್ರಕಾರ ಪ್ರತಿಯೊಬ್ಬ ಠೇವಣಿದಾರರ ರೂ. 1,00,000-00 ವರೆಗಿನ ಬ್ಯಾಂಕಿನ ಠೇವಣಾತಿಗಳನ್ನು ಡಿಪಾಜಿಟ್ ಇನ್ಶೂರೆನ್ಸ್ ಕಾರ್ಪೊರೇಷನ್ ಸಂಪೂರ್ಣವಾಗಿ ರಕ್ಷಿಸುತ್ತದೆ.

ನಿಮ್ಮ ಎಲ್ಲಾ ಬ್ಯಾಂಕಿನ ವ್ಯವಹಾರಗಳಿಗೆ ಒಮ್ಮೆ ಭೇಟಿಕೊಡಿ

ಜಿ. ಬಿ. ಪ್ರಸನ್ನಕುಮಾರ್
ಅಧ್ಯಕ್ಷರು

ಕೆ. ಎಸ್. ಮಂಜುನಾಥ್
ಉಪಾಧ್ಯಕ್ಷರು

ಕೆ. ಜಿ. ಗಟ್ಟಪ್ಪ
ಕಾರ್ಯನಿರ್ವಾಹಕ ನಿರ್ದೇಶಕರು

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

ಹೋಟೆಲ್
ಶ್ರೀ ನಂಜುಂಡೇಶ್ವರ
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.-1
ದೂರವಾಣಿ
8597, 2373, 2577




Hotel Shree Nanjundeswara

ಶ್ರೀ ನಂಜುಂಡೇಶ್ವರ
ಬೇಕರಿ
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು.-1
ದೂರವಾಣಿ : 8077



ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.-1
ದೂರವಾಣಿ : 2677

ಸಿ.ವಿ. ಮಹದೇವಯ್ಯ
ಮ್ಯಾನೇಜಿಂಗ್ ಪಾರ್ಟನರ್

ಶ್ರೀ ನಂಜುಂಡೇಶ್ವರ ಸ್ವೀಟ್ಸ್
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.-1
ದೂರವಾಣಿ : 2077

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.